*Recognised for use in Kannada Primary Schools by the Director of Public Instruction in Mysore*

# NITIVAKYAMANJARI

**BY**

**PRAKTANA–VIMARSA–VICHAKSHANA**

**RAO BHADUR R. NARASIMHACHARYA**
**M.A., M.R.A.S.**

# ನೀತಿ ವಾಕ್ಯ ಮಂಜರಿ

ಪ್ರಾಕ್ತನ ವಿಮರ್ಶ ವಿಚಕ್ಷಣ, ರಾವ್ ಬಹಾದುರ್
ರಾ. ನರಸಿಂಹಾಚಾರ್ಯ, ಎಮ್.ಎ., ಎಮ್.ಆರ್.ಎ.ಸ್
ಇವರಿಂದ ವಿರಚಿತವಾದದು

**SECOND EDITION**

**BANGALORE CITY**
**PRINTED AT THE BANGALORE PRESS**

**1929**

 **Price 2 As.**

# ದ್ವಿತೀಯ ಮುದ್ರಣ

---

## ಸೂಚನೆ

ಈ ಪುಸ್ತಕವು ಹಿಂದೆ ದರ್ಬಾರ್ ಬಕ್ಷಿಯಾಗಿದ್ದು, ಮೈಸೂರು ಸಂಸ್ಥಾನದಲ್ಲಿ ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರಥಮ ಪ್ರವರ್ತಕರಾಗಿ, ಅಹೋರಾತ್ರಿಯೂ ಅದರ ಪ್ರಚಾರದ ವಿಷಯದಲ್ಲಿ ಶ್ರಮಪಡುತ್ತಿದ್ದ ಶ್ರೀಮಾನ್ ಅಂಬಿಲ್ ನರಸಿಂಹಯ್ಯಂಗಾರ್ರ ಪ್ರೇರಣೆಯಿಂದ, ಮೈಸೂರು ಶ್ರೀಮನ್ಮಹಾರಾಣಿಯವರ ಬಾಲಿಕಾ ಪಾಠಶಾಲೆಯ ಉಪಯೋಗಕ್ಕೋಸ್ಕರ 1887ರಲ್ಲಿ ನನ್ನಿಂದ ರಚಿತವಾಗಿ ಮುದ್ರಿಸಲ್ಪಟ್ಟಿತು. ಇದು ಆ ಪಾಠಶಾಲೆಯ ಕೆಳಗಣ ತರಗತಿಗಳಲ್ಲಿ ಹಲವು ವರ್ಷ ಪಠ್ಯಪುಸ್ತಕವಾಗಿದ್ದಿತು. ಆ ಮುದ್ರಣದ ಪ್ರತಿಗಳು ಮುಗಿದು ಹೋಗಲು ಪುನರ್ಮುದ್ರಣವಾಗದೆ ಪುಸ್ತಕದ ಉಪಯೋಗವು ನಿಂತುಹೋಯಿತು. ನಾನೂ ಸುಮ್ಮನೆ ಇದ್ದುಬಿಟ್ಟೆನು.

ಈ ಪುಸ್ತಕವು ಮುಖ್ಯವಾಗಿ ಅವ್ವೈಯಾರ್, ತಿರುವಳ್ಳುವರ್ ಮೊದಲಾದ ತಮಿಳು ಕವಿಗಳ ಮತ್ತು ಕ್ಷೇಮೇಂದ್ರ, ಭರ್ತೃಹರಿ ಮೊದಲಾದ ಸಂಸ್ಕೃತ ಕವಿಗಳ ಗ್ರಂಥಗಳ ಆಧಾರದಿಂದಲೂ ಇತಿಹಾಸ ಪುರಾಣಗಳ ಆಧಾರದಿಂದಲೂ ಬರೆಯಲ್ಪಟ್ಟಿದೆ. ಇದರಲ್ಲಿ 4 ಭಾಗಗಳಿವೆ: ಒಂದನೆಯ ಭಾಗದಲ್ಲಿ ಮಕ್ಕಳು ಅಕ್ಷರಗಳನ್ನು ಕಲಿವುದಕ್ಕೂ ಅನುಕೂಲಿಸುವಂತೆ ನೀತಿಬೋಧಕವಾದ 116 ಸಣ್ಣ ಸಣ್ಣ ವಾಕ್ಯಗಳು ಅಕಾರಾದಿ ಕ್ರಮದಲ್ಲಿ ಹೇಳಿವೆ. ಎರಡನೆಯ ಭಾಗದಲ್ಲಿ 120 ದೊಡ್ಡ ದೊಡ್ಡ ನೀತಿಬೋಧಕ ವಾಕ್ಯಗಳು ಕೊಟ್ಟಿವೆ. ಮೂರನೆಯ ಭಾಗದಲ್ಲಿ 80 ನೀತಿಬೋಧಕ ವಾಕ್ಯಗಳೂ, ಅವುಗಳ ಅರ್ಥವನ್ನು ಸ್ಪಷ್ಟಮಾಡಲು ಉಚಿತವಾದ ದೃಷ್ಟಾಂತಗಳೂ ನಿರೂಪಿಸಿವೆ.

ನಾಲ್ಕನೆಯ ಭಾಗದಲ್ಲಿ 66 ನೀತಿಬೋಧಕ ವಾಕ್ಯಗಳೂ, ಅವಕ್ಕೆ ಪುರಾಣಾದಿಗಳಿಂದ ತಕ್ಕ ಉದಾಹರಣೆಗಳೂ ಹೇಳಿವೆ.

ಈ ಗ್ರಂಥವು ಪ್ರಾಥಮಿಕ ಪಾಠಶಾಲೆಗಳಲ್ಲಿ ಓದುವ ಬಾಲಕ ಬಾಲಿಕೆಯರ ನೈತಿಕ ಶಿಕ್ಷಣಕ್ಕೆ ಬಹಳ ಪ್ರಯೋಜನಕಾರಿಯಾಗಿದೆ ಎಂದು ಹಲವರು ಪಂಡಿತರು ಸೂಚಿಸಿದುದರಿಂದಲೂ, ಇದು ವಿದ್ಯಾಭ್ಯಾಸದ ಇಲಾಖೆಯಿಂದ ಕನ್ನಡ ಪ್ರೈಮರಿ ಸ್ಕೂಲುಗಳ ಉಪಯೋಗಕ್ಕಾಗಿ ಅಂಗೀಕೃತವಾಗಿರುವುದರಿಂದಲೂ, ಇದರ ಪ್ರತಿಗಳನ್ನು ಹಲವರು ಅಪೇಕ್ಷಿಸುವುದರಿಂದಲೂ ಇದನ್ನು ಪುನಃ ಮುದ್ರಿಸಲಾಗಿದೆ. ಹಿಂದಣ ಮುದ್ರಣಕ್ಕೂ, ಇದಕ್ಕೂ ವಿಶೇಷ ವ್ಯತ್ಯಾಸವಿಲ್ಲ. ಅಕ್ಷರ ಸಂಯೋಜನದ ತಪ್ಪುಗಳು ಮಾತ್ರ ತಿದ್ದಲ್ಪಟ್ಟಿವೆ.

ಈ ಗ್ರಂಥದಿಂದ ಪ್ರಾಥಮಿಕ ಪಾಠಶಾಲೆಗಳಲ್ಲಿಯ ವಿದ್ಯಾರ್ಥಿ ವಿದ್ಯಾರ್ಥಿನಿಯರ ನೀತಿಬೋಧೆಗೆ ಸ್ವಲ್ಪವಾದರೂ ಪ್ರಯೋಜನವಾದರೆ ನನ್ನ ಶ್ರಮವು ಸಾರ್ಥಕವೆಂದು ಎಣಿಸುವೆನು.

ಬೆಂಗಳೂರು,
ಏಪ್ರಿಲ್ 1929.

**ರಾ. ನರಸಿಂಹಾಚಾರ್ಯ.**

---

ಶ್ರೀ ಪರಬ್ರಹ್ಮಣೇನಮಃ

# ನೀತಿವಾಕ್ಯಮಂಜರಿ



## ೧ನೆಯ ಭಾಗ

1. ಅಚ್ಯುತನ ಧ್ಯಾನವನ್ನು ಮಾಡು.
2. ಅಪಕೀರ್ತಿಗೆ ಒಳಗಾಗಬೇಡ.
3. ಅಯೋಗ್ಯವಾದ ಕೆಲಸವನ್ನು ಮಾಡಬೇಡ.
4. ಅಲ್ಪವಾದ ಮಾತನ್ನಾಡಬೇಡ.
5. ಅಸೂಯೆಯನ್ನು ಬಿಡು.
6. ಅಹಂಕಾರಪಡಬೇಡ.
7. ಆದಾಯಕ್ಕೆ ತಕ್ಕ ವೆಚ್ಚವನ್ನು ಮಾಡು.
8. ಆಲೋಚಿಸಿ ಕೆಲಸಮಾಡು.
9. ಆಶ್ರಿತರನ್ನು ಕಾಪಾಡಿ ಬಾಳು.
10. ಆಳವಾದ ನೀರಿನಲ್ಲಿ ಆಡಬೇಡ.
11. ಇಷ್ಟಜನರೊಡನೆ ಊಟಮಾಡು.
12. ಈಶ್ವರನಲ್ಲಿ ಭಕ್ತಿಯಿಡು.
13. ಉಪಾಧ್ಯಾಯರಲ್ಲಿ ವಿಶ್ವಾಸವಿಡು.
14. ಊರಿನವರು ಮೆಚ್ಚುವಂತೆ ಕೆಲಸಮಾಡು.
15. ಊರಿನವರೊಡನೆ ಸೇರಿ ಬಾಳು.
16. ಋಣವನ್ನು ಮಾಡಬೇಡ.
17. ಎಲ್ಲೆಯನ್ನು ಮೀರಿ ನಡೆಯಬೇಡ.
18. ಏನುಮಾಡಿದರೂ ಅಕ್ಕರೆಯಿಂದ ಮಾಡು.
19. ಐಶ್ವರ್ಯವು ಶಾಶ್ವತವಲ್ಲವೆಂದು ತಿಳಿ.
20. ಒಂದನ್ನು ನೋಡಿ ಮತ್ತೊಂದನ್ನು ಹೇಳಬೇಡ.

21. ಒಳ್ಳೆಯ ಮಾರ್ಗವನ್ನು ದೃಢವಾಗಿ ಹಿಡಿ.
22. ಓದುವುದನ್ನು ಬಿಡಬೇಡ.
23. ಔದಾರ್ಯವು ಶ್ಲಾಘ್ಯವಾದ ಗುಣವು.
24. ಕಳ್ಳತನವನ್ನು ಕಲಿಯಬೇಡ.
25. ಕಾಲವನ್ನು ವ್ಯರ್ಥವಾಗಿ ಕಳೆಯಬೇಡ.
26. ಕಿತ್ತಾಟವನ್ನು ಮಾಡಬೇಡ.
27. ಕೀರ್ತಿಯನ್ನು ಸಂಪಾದಿಸು.
28. ಕುಟಿಲತನವನ್ನು ಬಿಡು.
29. ಕೃತ್ರಿಮ ಸ್ವಭಾವವು ಕೇಡಿಗೆ ಮೂಲವು.
30. ಕೆಟ್ಟವರೊಡನೆ ಸೇರಬೇಡ.
31. ಕೇಡುಂಟುಮಾಡುವ ಕೆಲಸವನ್ನು ಬಿಡು.
32. ಕೈಯಲ್ಲಾದಷ್ಟು ಉಪಕಾರಮಾಡು.
33. ಕೊಳೆಯ ಬಟ್ಟೆಯನ್ನು ಉಡಬೇಡ.
34. ಕೋಪವನ್ನು ಅಡಗಿಸು.
35. ಖಳರನ್ನು ಕಂಡರೆ ದೂರಕ್ಕೆ ತೊಲಗು.
36. ಗಣಿತಶಾಸ್ತ್ರವನ್ನು ಅಸಡ್ಡೆಮಾಡಬೇಡ.
37. ಗುಟ್ಟುಮಾತನ್ನು ರಟ್ಟುಮಾಡಬೇಡ.
38. ಗುಣವನ್ನು ನೋಡಿ ಸ್ನೇಹಮಾಡು.
39. ಗೌರವವನ್ನು ಹೊಂದುವ ಮಾರ್ಗದಲ್ಲಿ ನಿಲ್ಲು.
40. ಘಾತುಕರ ಸಹವಾಸವನ್ನು ಮಾಡಬೇಡ.
41. ಚಂದವಲ್ಲದ ಕೆಲಸವನ್ನು ಮಾಡಬೇಡ.
42. ಚಪಲಚಿತ್ತವನ್ನು ಬಿಡು.
43. ಚಾಡಿಯನ್ನು ಹೇಳಬೇಡ.
44. ಚಿಕ್ಕವಯಸ್ಸಿನಲ್ಲಿ ವಿದ್ಯೆಯನ್ನು ಕಲಿ.
45. ಚಿತ್ತಕ್ಷೋಭವನ್ನು ಹೊಂದಬೇಡ.
46. ಛಲವನ್ನು ಹಿಡಿಯಬೇಡ.
47. ಛೀ! ಎನ್ನಿಸಿಕೊಂಡು ತಿರುಗಬೇಡ.

48. ಜಗಳದ ಕೆಲಸವನ್ನು ಮಾಡಬೇಡ.
49. ಜಗಳದ ಸ್ಥಳದಲ್ಲಿ ನಿಲ್ಲಬೇಡ.
50. ಜಂತುಗಳನ್ನು ಕೊಲ್ಲಬೇಡ.
51. ಜಿಪುಣತನವನ್ನು ಬಿಡು.
52. ಜೂಜಾಟದಲ್ಲಿ ಆಶೆಯಿಡಬೇಡ.
53. ಠಕ್ಕು ಮಾಡಬೇಡ.
54. ತಂದೆತಾಯಿಗಳನ್ನು ಕಾಪಾಡು.
55. ತಪ್ಪಾಗಿ ಮಾತನಾಡಬೇಡ.
56. ತಿಳಿದ ಕೆಲಸವನ್ನು ಮರೆಮಾಡಬೇಡ.
57. ದರಿದ್ರರಲ್ಲಿ ದಯೆಯಿಡು.
58. ದಾನವನ್ನು ತಪ್ಪಿಸಬೇಡ.
59. ದುರಾಚಾರ ಮಾಡಬೇಡ.
60. ದುಃಖಕ್ಕೆ ಆಸ್ಪದಕೊಡಬೇಡ.
61. ದೇವರ ಸೇವೆಯನ್ನು ಮಾಡು.
62. ದೇವರನ್ನು ನಿಂದಿಸಬೇಡ.
63. ದೇಶಾಚಾರವನ್ನು ಅನುಸರಿಸಿ ಬಾಳು.
64. ದೇಹವನ್ನು ಸರಿಯಾಗಿ ನೋಡಿಕೊಳ್ಳು.
65. ದೊಡ್ಡವರ ಮಾತನ್ನು ಕೇಳು.
66. ದೊಡ್ಡವರ ಮುಂದೆ ವಾದವಾಡಬೇಡ.
67. ಧರ್ಮಮಾಡುವುದರಲ್ಲಿ ಆಶೆಯಿಡು.
68. ಧೈರ್ಯವನ್ನು ಬಿಡಬೇಡ.
69. ನಂಬಿದವರನ್ನು ಕೈಬಿಡಬೇಡ.
70. ನ್ಯಾಯವಾಗಿ ಮಾತನಾಡು.
71. ನಿಜ ಹೇಳುವುದಕ್ಕೆ ಹಿಂದೆಗೆಯಬೇಡ.
72. ನಿನ್ನ ಸ್ಥಿತಿಯನ್ನು ಮೀರಿ ನಡೆಯಬೇಡ.
73. ನಿರ್ಮಲವಾದ ನೀರನ್ನು ಕುಡಿ.
74. ನಿಷ್ಠುರದ ಮಾತನ್ನಾಡಬೇಡ.

75. ನೀಚತನವನ್ನು ಬಿಡು.
76. ಪರರನ್ನು ನಿಂದಿಸಬೇಡ.
77. ಪರರ ಸೊತ್ತನ್ನು ಅಪಹರಿಸಬೇಡ.
78. ಪಕ್ಷಪಾತದ ಮಾತನ್ನಾಡಬೇಡ.
79. ಪಾಪಕಾರ್ಯವನ್ನು ಮಾಡಬೇಡ.
80. ಪೂರ್ವ ಸ್ನೇಹವನ್ನು ಮರೆಯಬೇಡ.
81. ಬಂಧುವರ್ಗವನ್ನು ಸೇರಿರು.
82. ಬೆಳಗಿನ ಜಾವದಲ್ಲಿ ನಿದ್ರೆಯನ್ನು ಬಿಡು.
83. ಬೇಕೆಂದು ಕೆಟ್ಟಕೆಲಸವನ್ನು ಮಾಡಬೇಡ.
84. ಬೇಡುವುದು ಅಗೌರವವು.
85. ಭಾಷೆಗೆ ತಪ್ಪಬೇಡ.
86. ಭಿಕ್ಷ ನೀಡಿ ಭೋಜನಮಾಡು.
87. ಮನಸ್ಸು ನೋಯುವಂತೆ ಮಾತನಾಡಬೇಡ.
88. ಮಾಡಿದ ಉಪಕಾರವನ್ನು ಮರೆಯಬೇಡ.
89. ಮಾಡುವ ಕೆಲಸವನ್ನು ಚೆನ್ನಾಗಿ ಮಾಡು.
90. ಮೂರ್ಖರ ಸ್ನೇಹವನ್ನು ಮಾಡಬೇಡ.
91. ಯೋಗ್ಯತೆಯನ್ನು ಹೇಳಿಕೊಳ್ಳಬೇಡ.
92. ರಾಜಾಜ್ಞೆಯಲ್ಲಿ ನಿಲ್ಲು.
93. ರೋಗಕ್ಕೆ ಆಸ್ಪದಕೊಡಬೇಡ.
94. ರೋಗವನ್ನು ಮರೆಮಾಡಬೇಡ.
95. ಲೋಕರೀತಿಯರಿತು ನಡೆ.
96. ವಂಚನೆಯ ಮಾತನ್ನಾಡಬೇಡ.
97. ವ್ಯರ್ಥವಾದ ವೆಚ್ಚವನ್ನು ಮಾಡಬೇಡ.
98. ವಿದ್ಯೆಯಲ್ಲಿ ಆಶೆಯಿಡು.
99. ಶಕ್ತಿ ಮಿಾರಿ ಕೆಲಸಮಾಡಬೇಡ.
100. ಶತ್ರುಗಳೊಡನೆ ಸೇರಬೇಡ.
101. ಶತ್ರುವಿಗೆ ಆಸ್ಪದಕೊಡಬೇಡ.

102. ಸತ್ಸಂಗದಲ್ಲಿರು.
103. ಸದ್ಗುಣವನ್ನು ಕೈಬಿಡಬೇಡ.
104. ಸುಳ್ಳುಮಾತನ್ನಾಡಬೇಡ.
105. ಸೇರತಕ್ಕ ಸ್ಥಳವರಿತು ಸೇರು.
106. ಸ್ನೇಹಮಾಡಿ ಅಗಲಬೇಡ.
107. ಸೋಮಾರಿಯಾಗಿ ತಿರುಗಬೇಡ.
108. ಸೋಲುವ ವ್ಯಾಜ್ಯಗಳಿಗೆ ಹೋಗಬೇಡ.
109. ಹಾವನ್ನು ಆಡಿಸಬೇಡ.
110. ಹಿರಿಯರಿಗೆ ಮರ್ಯಾದೆ ಮಾಡು.
111. ಹೆಚ್ಚು ತಿಂಡಿಯನ್ನು ತಿನ್ನಬೇಡ.
112. ಹೆಚ್ಚು ನಿದ್ದೆಯನ್ನು ಮಾಡಬೇಡ.
113. ಹೆಚ್ಚು ಮಾತನ್ನಾಡಬೇಡ.
114. ಹೇಳುವುದನ್ನು ನಿಸ್ಸಂದೇಹವಾಗಿ ಹೇಳು.
115. ಹೊಟ್ಟೆಗಿಚ್ಚಿನ ಮಾತನ್ನಾಡಬೇಡ.
116. ಕ್ಷಮಾಗುಣವು ಶ್ಲಾಘ್ಯವಾದುದು.

---

## ೨ನೆಯ ಭಾಗ

1. ಅಕ್ಷರಗಳಿಗೆಲ್ಲಾ ಅಕಾರವು ಹೇಗೆ ಆದಿಯೋ ಹಾಗೆಯೇ ಈ ಲೋಕಗಳಿಗೆಲ್ಲಾ ದೇವರು ಆದಿ.
2. ಒಬ್ಬನು ಮಾಡಿದ ಉಪಕಾರವನ್ನು ಮರೆಯುವುದು ಧರ್ಮವಲ್ಲ; ಅವನು ಮಾಡಿದ ಅಪಕಾರವನ್ನು ಮರೆತುಬಿಡುವುದು ಶ್ಲಾಘ್ಯವಾದ ಗುಣವು.
3. ಮನಸ್ಸಿನಲ್ಲಿ ದೋಷವಿಲ್ಲದೆ ಇರುವಿಕೆಯೇ ಧರ್ಮವು; ಮಾತು, ವೇಷ, ಇವುಗಳಿಂದ ಪ್ರಯೋಜನವಿಲ್ಲ.
4. ಸಜ್ಜನರು ತಮಗೆ ಇತರರು ಮಾಡಿದ ಉಪಕಾರವು ಸ್ವಲ್ಪವಾಗಿದ್ದರೂ ಅದನ್ನೇ ಬಹಳವಾಗಿ ಎಣಿಸುತ್ತಾರೆ.
5. ಅಪಮಾನದ ಊಟಕ್ಕಿಂತ ಉಪವಾಸವೇ ಲೇಸು.
6. ಬಡವನು ಮಾಡುವ ತ್ಯಾಗವೇ ತ್ಯಾಗ; ಶಕ್ತಿಯುಳ್ಳವನ ಸೈರಣೆಯೇ ಸೈರಣೆ.
7. ಅಲ್ಪರ ಕೋಪವು ಅಡಗುವುದೇ ಇಲ್ಲ; ದೊಡ್ಡವರ ಕೋಪವು ಬಿಸುನೀರು ಆರುವಂತೆ ಜಾಗ್ರತೆಯಾಗಿ ಅಡಗಿ ಹೋಗುತ್ತದೆ.
8. ಜಿಪುಣನ ಐಶ್ವರ್ಯಕ್ಕಿಂತಲೂ ತ್ಯಾಗಿಯ ಬಡತನವೇ ಒಳ್ಳೆಯದು.
9. ದರಿದ್ರರಿಗೆ ದಾನಮಾಡಬೇಕು; ಹಿಂದಕ್ಕೆ ಕೊಡಬಲ್ಲವರಿಗೆ ಕೊಡುವುದು ಹಣವನ್ನು ಬಡ್ಡಿಗೆ ಹಾಕಿದ ಹಾಗೆ.
10. ಮೂರ್ಖರಿಗೆ ಧರ್ಮೋಪದೇಶವನ್ನು ಮಾಡುವುದು ಹಂದಿಯ ಬಾನೆಗೆ ಮಧುರವಾದ ಮಾವಿನ ಹಣ್ಣನ್ನು ಹಿಂಡಿದಹಾಗೆ.
11. ಬಡವರಾದರೂ ಬೇಡದೆ ಇರುವವರೇ ಧನಿಕರು; ಧನಿಕರಾದರೂ ದಾನಮಾಡದವರೇ ಬಡವರು.
12. ತನಗಿಂತ ಬಲಶಾಲಿಯೊಡನೆ ಜಗಳಕ್ಕೆ ಹೋಗುವುದು ಜಾರಿ ಬೀಳುತ್ತೇನೆಂದು ತಿಳಿದು ಪಾಸೆಯ ಕಲ್ಲನ್ನು ಮೆಟ್ಟಿದ ಹಾಗೆ.
13. ಇದ್ದಾಗ ಉಣ್ಣದೆ ಉಡದೆ ಕೊಡದೆ ಇದ್ದವನ ಹಣವು ಇತರರ ಪಾಲು.

14. ಈಗ ಬಾ ಆಗ ಬಾ ಎಂದು ಹೇಳದೆ ಬೇಡುವವರಿಗೆ ಕೈಯಲ್ಲಾದಷ್ಟು ಕೊಟ್ಟು ಕಳುಹಿಸಬೇಕು; ಹಾಗಿಲ್ಲದಿದ್ದರೆ ಒಂದೇ ಆವರ್ತಿ ಇಲ್ಲವೆಂದು ಹೇಳಿಬಿಡಬೇಕು.

15. ಸಮಯದಲ್ಲಿ ಕೊಟ್ಟ ಅಣು ಬೆಟ್ಟಕ್ಕೆ ಸಮಾನ.

16. ಸಜ್ಜನರ ಸಂಗವು ಅಮೃತವನ್ನು ಕುಡಿದಂತೆ; ದುರ್ಜನರ ಸಂಗವು ಬಚ್ಚಲ ರೊಚ್ಚಿನಲ್ಲಿ ಇದ್ದಂತೆ.

17. ತನ್ನಲ್ಲಿ ಯಾವಾಗಲೂ ತಪ್ಪನ್ನು ಹುಡುಕುವವನ ಎಡೆಯಲ್ಲಿರುವುದು ಹಾವಿನ ಹೆಡೆಯ ನೆಳಲಲ್ಲಿ ಕಪ್ಪೆ ಇದ್ದಹಾಗೆ.

18. ಹಂಗಿನವರ ಮನೆಗಿಂತ ಹಾಳು ಮಂಟಪವೇ ಲೇಸು; ಭಂಗಪಟ್ಟು ಉಣ್ಣುವ ಬಿಸಿಯನ್ನಕ್ಕಿಂತ ತಂಗಳನ್ನವೇ ಲೇಸು.

19. ಸಾಲಮಾಡುವಾಗ ಹಾಲೂ ಅನ್ನವನ್ನು ತಿಂದಹಾಗಿರುವುದು; ಸಾಲಕೊಟ್ಟವನು ಕೇಳುವಾಗ ಚೇಳು ಕಚ್ಚಿದಂತಾಗುವುದು.

20. ಒಳ್ಳೆಯ ಮಾತುಗಳನ್ನು ಹೇಳಬಹುದಾಗಿದ್ದರೂ ನಿಷ್ಠುರವಾದ ಮಾತನ್ನಾಡುವುದು ಹಣ್ಣನ್ನು ಬಿಟ್ಟು ಕಾಯನ್ನು ತಿಂದಹಾಗೆ.

21. ಬೆಂಕಿಯಿಂದ ಆದ ಗಾಯವು ಜಾಗ್ರುತೆಯಾಗಿ ಆರಿಹೋಗುವುದು; ನಾಲಗೆಯಿಂದ ಆದ ಹುಣ್ಣು ಆರುವುದೇ ಇಲ್ಲ.

22. ಇತರರಲ್ಲಿರುವ ದೋಷಗಳನ್ನು ಹುಡುಕುವಂತೆ ತಮ್ಮಲ್ಲಿರುವ ದೋಷಗಳನ್ನೂ ಕೂಡ ಹುಡುಕುವುದು ಬಹಳ ಪ್ರಯೋಜನವನ್ನು ಉಂಟುಮಾಡುವುದು.

23. ತನ್ನನ್ನು ತಾನು ಕಾಪಾಡಿಕೊಳ್ಳಬೇಕೆಂಬವನು ಕೋಪವನ್ನು ಬಿಡಬೇಕು; ಬಿಡದೆಹೋದರೆ ಅದು ತನ್ನನ್ನು ಕೆಡಿಸುವುದು.

24. ತಮಗೆ ಒಬ್ಬನು ಅಪಕಾರ ಮಾಡಿದರೂ ತಾವು ಪ್ರತಿಮಾಡದೆ ಇರುವುದು ಸಜ್ಜನರ ಸ್ವಭಾವವು.

25. ತೊಂದರೆಪಡಿಸುವವರಿಗೆ ಆಗುವುದು ಒಂದು ದಿವಸದ ಸುಖವು; ಸಹಿಸಿಕೊಂಡವರ ಖ್ಯಾತಿ ಬಹಳ ದಿವಸ ಇರುವುದು.

26. ಯಾವುದನ್ನು ಕಾಯದೆ ಇದ್ದರೂ ನಾಲಗೆಯನ್ನು ಕಾಯಬೇಕು; ಅದನ್ನು ಕಾಯದೆ ಇದ್ದರೆ ದುಃಖಕ್ಕೆ ಆಸ್ಪದವಾಗುವುದು.

27. ಅಡಗಿರುವುದು ಎಲ್ಲರಿಗೂ ಒಳ್ಳೆಯದು; ಐಶ್ವರ್ಯವುಳ್ಳವರು ಅಡಗಿರುವುದು ಐಶ್ವರ್ಯಕ್ಕೆ ಒಂದೈಶ್ವರ್ಯವಿದ್ದಹಾಗೆ.

28. ತಮಗಿಂತ ಬಲಹೀನಸರನ್ನು ತಾವು ತೊಂದರೆಪಡಿಸುವಾಗ ತಮಗಿಂತ ಬಲಶಾಲಿಗಳ ಮುಂದೆ ತಮ್ಮ ಸ್ಥಿತಿಯನ್ನು ಸ್ಮರಿಸಿಕೊಳ್ಳಬೇಕು.

29. ಇತರರಿಗೆ ಮನಃಪೂರ್ವಕವಾಗಿ ಸ್ವಲ್ಪವಾದರೂ ದುಃಖವನ್ನು ಕೊಡದೆ ಇರುವುದೇ ಶ್ರೇಷ್ಠವಾದ ಧರ್ಮವು.

30. ನಿರ್ದೋಷವಾದ ವಿದ್ಯೆಯನ್ನು ಕಲಿಯಬೇಕು; ಕಲಿತು ಅದಕ್ಕೆ ಅನುಸಾರವಾಗಿ ನಡೆಯಲೂ ಬೇಕು.

31. ಕಲಿತವರೇ ಕಣ್ಣುಳ್ಳವರು; ಇತರರ ಮುಖದಲ್ಲಿ ಇರುವುವು ಎರಡು ಹುಣ್ಣುಗಳೆಂದು ಭಾವಿಸಬೇಕು.

32. ಚಿಲುಮೆಯಲ್ಲಿ ಆಗೆದಷ್ಟೂ ನೀರು ಬರುವುದು. ಒಬ್ಬನು ವಿದ್ಯೆಯನ್ನು ಕಲಿತಷ್ಟೂ ಜ್ಞಾನವು ಹೆಚ್ಚುವುದು.

33. ಕಲಿತವರಿಗೆ ಏನೂ ಇಲ್ಲದಿದ್ದರೂ ಎಲ್ಲಾ ಇದ್ದಹಾಗೆ; ಮೂಢರಿಗೆ ಎಲ್ಲಾ ಇದ್ದರೂ ಏನೂ ಇಲ್ಲದಹಾಗೆ.

34. ದೊಡ್ಡವರು ಮಾಡುವ ಹಿತೋಪದೇಶವು ಜಾರುವ ಕೆಸರಿನಲ್ಲಿ ಕೋಲಿದ್ದಹಾಗೆ.

35. ಒಬ್ಬನ ಸಹವಾಸದ ಜನಗಳಿಂದ ಅವನು ಇಂಥವನೆಂದು ಹೇಳಬಹುದು.

36. ಸಜ್ಜನರು ಕಷ್ಟಕಾಲದಲ್ಲಿಯೂ ಅಗೌರವವಾದ ಕೆಲಸವನ್ನು ಮಾಡಲಾರರು.

37. ಆಲೋಚಿಸಿ ಕೆಲಸವನ್ನು ಮಾಡುವುದಕ್ಕೆ ಆರಂಭಿಸಬೇಕು; ಆರಂಭಿಸಿದಮೇಲೆ ಆಲೋಚಿಸುವೆನು ಎಂಬುದು ದೋಷಾವಹವು.

38. ಮಾಡುವುದು ಕಷ್ಟವೆಂದು ಕೆಲಸವನ್ನು ಬಿಡಕೂಡದು; ಪ್ರಯತ್ನವು ಯಾವ ಕೆಲಸವನ್ನಾದರೂ ಕೈಗೂಡಿಸುವುದು.

39. ಪ್ರಯತ್ನಮಾಡುವುದೇ ಸಂಪತ್ತಿಗೆ ಕಾರಣವು; ಅದಿಲ್ಲದೆ ಇರುವಿಕೆಯೇ ದಾರಿದ್ರ್ಯಕ್ಕೆ ಮೂಲವು.

40. ಮೊದಲು ದುಃಖಕರವಾಗಿದ್ದರೂ ಕೊನೆಗೆ ಸುಖವನ್ನು ಕೊಡುವ ಕೆಲಸವನ್ನು ಬಿಡದೆ ಮನೋದಾರ್ಢ್ಯದಿಂದ ಮಾಡಲೇಬೇಕು.

41. ಕನ್ನಡಿ ಇದಿರಿಗಿರುವುದನ್ನು ತೋರಿಸುವ ಹಾಗೆ ಮುಖವು ಮನಸ್ಸಿನಲ್ಲಿರುವುದನ್ನು ಸೂಚಿಸುವುದು.

42. ಉಪದೇಶಮಾಡುವುದು ಎಲ್ಲರಿಗೂ ಸುಲಭವು; ಅದರಂತೆ ನಡೆಯುವುದು ಬಹಳ ಕಷ್ಟವು.

43. ವಿದ್ಯೆಯನ್ನು ಕಲಿತು ಇತರರಿಗೆ ಬೋಧಿಸಿ ತಾನು ಅದರಂತೆ ನಡೆಯದವನು ಮೂಢನೆನ್ನಿಸಿಕೊಳ್ಳುವನು.

44. ಮನಸ್ಸಿಗೆ ಸರಿಯಾಗಿಲ್ಲದವರೊಂದಿಗೆ ಇರುವುದು ಹಾವಿರುವ ಮನೆಯಲ್ಲಿ ವಾಸಮಾಡುವಹಾಗೆ.

45. ತಾನೇ ಕಷ್ಟದಿಂದ ಸಂಪಾದಿಸಿದುದು ಅಂಬಲಿಯೇ ಆದರೂ ಅದರಿಂದ ಉಂಟಾಗುವ ಸುಖವು ಇತರರು ಕೊಟ್ಟ ಶ್ಲಾಘ್ಯವಾದ ಪದಾರ್ಥದಿಂದಲೂ ಆಗುವುದಿಲ್ಲ.

46. ಸಜ್ಜನರಿಗೆ ಮಾಡುವ ಮರ್ಯಾದೆಗಿಂತಲೂ ದುರ್ಜನರಿಗೆ ಹೆಚ್ಚಾಗಿ ಮರ್ಯಾದೆ ಮಾಡುವುದರಿಂದ ಬಹಳ ಪ್ರಯೋಜನವುಂಟು.

47. ಇತರರನ್ನು ಸಂತೋಷಪಡಿಸಬೇಕೆಂಬವನು ಅವರ ಆಶಯವನ್ನು ತಿಳಿದು ಅದನ್ನನುಸರಿಸಿ ನಡೆಯುವುದಕ್ಕೆ ಪ್ರಯತ್ನಪಡಬೇಕು.

48. ಸಮಯದಲ್ಲಿ ಹಿತವಾಗಿಯೂ ಮಿತವಾಗಿಯೂ ಸಂದರ್ಭಾನುಸಾರವಾಗಿಯೂ ಮಾತನಾಡುವುದೇ ಮನುಷ್ಯನ ಯೋಗ್ಯತೆಯನ್ನು ತೋರಿಸುತ್ತದೆ.

49. ವಿನೋದಾರ್ಥವಾಗಿಯೂ ಇತರರ ಮನಸ್ಸು ನೋಯುವಂತೆ ಮಾತನ್ನಾಡಬಾರದು.

50. ತನ್ನ ಮನೆಗೆ ಒಬ್ಬ ದುಷ್ಟನು ಬಂದರೂ ಅವನನ್ನು ಸರಿಯಾಗಿ ಕಂಡು ಕಳುಹಿಸಿಕೊಡಬೇಕು.

51. ಒಬ್ಬರು ಹೇಳುವ ರಹಸ್ಯದ ಮಾತುಗಳನ್ನು ಮರೆಯಲ್ಲಿ ನಿಂತು ಕೊಂಡು ಕೇಳಬಾರದು.

52. ವಿದ್ಯೆಯನ್ನೂ ಧನವನ್ನೂ ಸ್ವಲ್ಪವೆಂದು ಅಸಡ್ಡೆಮಾಡದೆ ಸಂಗ್ರಹಿಸುವವನು ಸೌಖ್ಯವನ್ನು ಹೊಂದುವನು.

53. ಮೊದಲು ದರಿದ್ರನಾಗಿದ್ದು ಹಣಗಾರನಾಗುವುದೂ ಪಾದಚಾರಿಯಾಗಿದ್ದು ಯಾನಚಾರಿಯಾಗುವುದೂ ಸಂತೋಷಕರವು.

54. ಪುಸ್ತಕದಲ್ಲಿರುವ ವಿದ್ಯೆಯೂ ಪರರ ಕೈಸೇರಿದ ಹಣವೂ ಸಮಯಕ್ಕೆ ಒದಗುವುದಿಲ್ಲ.

55. ಕವಿತ್ವ, ಶೌರ್ಯ, ಔದಾರ್ಯ ಇವು ಸಹಜವಾದ ಗುಣಗಳೇ ಹೊರತು ಅಭ್ಯಾಸದಿಂದ ಬರುವುವಲ್ಲ.

56. ರಾಜಧರ್ಮವನ್ನೂ ದೇಶಧರ್ಮವನ್ನೂ ಕುಲಧರ್ಮವನ್ನೂ ದೂಷಿಸಬಾರದು; ಶಕ್ತನಾದರೂ ಲೌಕಿಕಾಚಾರವನ್ನು ಮೀರಿ ನಡೆಯಬಾರದು.

57. ನೋಡುವವರಿಗೆ ಒಂದು ವಿಧವಾಗಿ ಕಾಣಿಸಿಕೊಂಡು ಅಂತಃ ಬೇರೆ ವಿಧವಾಗಿರುವುದು ದುರ್ಜನರಿಗೆ ಲಕ್ಷಣವು.

58. ಸದ್ಗುಣಗಳು ಶತ್ರುಗಳಲ್ಲಿದ್ದರೂ ಗ್ರಹಿಸತಕ್ಕುವು; ದುರ್ಗುಣಗಳು ಗುರುಗಳಲ್ಲಿದ್ದರೂ ಬಿಡತಕ್ಕುವು.

59. ಕ್ರೂರವಾದ ಮಾತುಗಳಿಂದ ಭಾರ್ಯಾಪುತ್ರರೂ ವಿರೋಧಿಗಳಾಗುವರು; ಮೃದುಭಾಷಣದಿಂದ ಪಶುಗಳೂ ಸ್ವಾಧೀನವಾಗುವುವು.

60. ಸುಳ್ಳು ಸಾಕ್ಷ್ಯವನ್ನು ಹೇಳಬಾರದು; ನಿಜವಾದ ಸಾಕ್ಷ್ಯವನ್ನು ತಪ್ಪಿಸಲೂ ಬಾರದು.

61. ಸತ್ಪುರುಷರ ಸಂಗವನ್ನು ಬಿಟ್ಟು ದುಷ್ಟರ ಸ್ನೇಹವನ್ನು ಮಾಡುವುದು ಪಂಜರದಲ್ಲಿರುವ ಗಿಳಿಯನ್ನು ಓಡಿಸಿ ಕಾಗೆಯನ್ನು ತಂದಿಟ್ಟಹಾಗೆ; ಕೈಯಲ್ಲಿರುವ ಕನ್ನಡಿಯನ್ನು ಬಿಸುಟು ನೀರ ನೆಳಲನ್ನು ನೋಡಿದಹಾಗೆ; ಮಡಕೆಯಲ್ಲಿರುವ ಹಸುವಿನ

ತುಪ್ಪವನ್ನು ಸುರಿದುಬಿಟ್ಟು ಬೇವಿನ ಎಣ್ಣೆಯನ್ನು ಹಾಕಿದ ಹಾಗೆ.

62. ವಿದ್ಯಾವಂತನಿಗೆ ವಿನಯವೂ ಧನಿಕನಿಗೆ ತ್ಯಾಗವೂ ಇರುವುದು ಭಂಗಾರದ ಹೂವಿಗೆ ವಾಸನೆ ಇದ್ದ ಹಾಗೆ.

63. ತಂದೆ ಮಗನಿಗೆ ಮಾಡತಕ್ಕ ಉಪಕಾರವು ಯಾವುದೆಂದರೆ— ಅವನಿಗೆ ಚೆನ್ನಾಗಿ ವಿದ್ಯೆಯನ್ನು ಕಲಿಸಿ ವಿದ್ವಾಂಸರ ಸಭೆಯಲ್ಲಿ ಮುಂದಾಗಿರುವಹಾಗೆ ಮಾಡುವುದು. ಇದಕ್ಕಿಂತ ಹೆಚ್ಚಾದುದು ಯಾವುದೂ ಇಲ್ಲ.

64. ತನ್ನ ಮಗನು ವಿದ್ಯಾಪಾರಂಗತನಾದನೆಂದು ಕೇಳಿ, ತಾಯಿ ಅವನನ್ನು ಹೆತ್ತಕಾಲದಲ್ಲಿ ಹೊಂದಿದ ಸಂತೋಷಕ್ಕಿಂತಲೂ ಹೆಚ್ಚಾದ ಸಂತೋಷವನ್ನು ಹೊಂದುವಳು.

65. "ನಾನು ಎಷ್ಟೋ ತಪ್ಪುಗಳನ್ನು ಮಾಡಿದ್ದೇನೆ. ಇನ್ನೂ ಒಂದನ್ನು ಮಾಡಿದರೆ ದೋಷವೇನು?" ಎನ್ನಬಾರದು. ನೀರಿನ ತೊಟ್ಟುಗಳಿಂದ ಬಿಂದಿಗೆ ತುಂಬಿಹೋಗುವುದಿಲ್ಲವೆ?

66. ಗಂಡಹೆಂಡರಿಗೂ, ತಂದೆ ತಾಯಿಗಳಿಗೂ, ಅಕ್ಕ ತಂಗೆಯರಿಗೂ, ಅಣ್ಣ ತಮ್ಮಂದಿರಿಗೂ, ಗುರು ಶಿಷ್ಯರಿಗೂ ಭೇದವನ್ನು ಉಂಟು ಮಾಡಬಾರದು.

67. ಯಾವ ಸ್ಥಳದಲ್ಲಿ ಒಳ್ಳೆಯ ಮಾತು, ಕೆಟ್ಟ ಮಾತು ಎಂಬುವೆಲ್ಲಾ ಒಂದೇ ಆಗಿರುವುವೋ ಅಲ್ಲಿ ಪ್ರಾಜ್ಞನು ಏನೂ ಹೇಳದಿರುವುದು ಉತ್ತಮವು.

68. ಚಿತೆ, ಚಿಂತೆ ಇವುಗಳಿಗೆ ಸೊನ್ನೆಯೇ ವ್ಯತ್ಯಾಸವಾಗಿದೆ. ಚಿತೆ ಜೀವವಿಲ್ಲದವನನ್ನು ದಹಿಸುತ್ತದೆ; ಚಿಂತೆ ಸಜೀವನನ್ನು ದಹಿಸುತ್ತದೆ.

69. ಲೋಕದಲ್ಲಿ ಎಲ್ಲವನ್ನೂ ತಿಳಿದವರು ಯಾರೂ ಇಲ್ಲ. ಆದುದರಿಂದ ನಾವು ಸರ್ವಜ್ಞರು ಎಂದು ಅಹಂಕಾರಪಡಬಾರದು. ದೊಡ್ಡ ಪರ್ವತವೂ ಕೂಡ ಚಿಕ್ಕ ಉಳಿಯಿಂದ ಚೂರು ಮಾಡಲ್ಪಡುವುದು.

70. ತಮ್ಮವರು, ಪರರು, ದೊಡ್ಡವರು, ಚಿಕ್ಕವರು ಎಂದು ನೋಡದೆ ಕಷ್ಟಪಡುವವರಿಗೆ ಸಹಾಯಮಾಡುವುದಕ್ಕೆ ಸಿದ್ಧರಾಗುವರೇ ಮಹಾತ್ಮರೆನ್ನಿಸಿಕೊಳ್ಳುವರು.

71. ಋಣಶೇಷ, ಶತ್ರುಶೇಷ, ರೋಗಶೇಷ—ಇವುಗಳನ್ನು ನಿಲ್ಲಿಸ ಬಾರದು.

72. ಹೋದುದಕ್ಕೆ ದುಃಖಪಡಬಾರದು; ತಾನು ಮಾಡಿದುದನ್ನು ಹೇಳಿಕೊಳ್ಳಬಾರದು; ನೀಚರ ಸೇವೆಯನ್ನು ಮಾಡಬಾರದು.

73. ಆಹಾರದಲ್ಲಿಯೂ, ವ್ಯವಹಾರದಲ್ಲಿಯೂ, ಸಂಗೀತದಲ್ಲಿಯೂ, ಯುದ್ಧದಲ್ಲಿಯೂ, ನೃತ್ಯದಲ್ಲಿಯೂ ಲಜ್ಜೆಯನ್ನು ಬಿಡಬೇಕು.

74. ಸ್ವಜನರಲ್ಲಿ ದ್ವೇಷಮಾಡಬಾರದು; ಬಲಶಾಲಿಯೊಡನೆ ಹೆಣಗ ಬಾರದು; ಕೇಳದೆ ಇರುವಾಗ ಏನನ್ನೂ ಹೇಳಬಾರದು.

75. ಕ್ಷಮಾಗುಣವೇ ಒಂದು ಕವಚವು; ಕೋಪವೇ ಒಂದು ಶತ್ರು; ಸ್ನೇಹಿತನೇ ಒಂದು ದಿವ್ಯೌಷಧವು; ದುರ್ಜನರೇ ಕ್ರೂರವಾದ ಸರ್ಪಗಳು.

76. ಲೋಕದಲ್ಲಿ ವೇದಜ್ಞರೂ ಶಾಸ್ತ್ರಜ್ಞರೂ ಧರ್ಮಜ್ಞರೂ ನೀತಿ ಜ್ಞರೂ ಅನೇಕರಿದ್ದಾರೆ. ಆದರೆ ತಮ್ಮಗಳ ಅಜ್ಞಾನಜ್ಞರು ಬಹಳ ವಿರಳರಾಗಿದ್ದಾರೆ.

77. ಸಾಧಾರಣವಾದ ಧನಕ್ಕೂ ವಿದ್ಯಾಧನಕ್ಕೂ ಬಹಳ ವ್ಯತ್ಯಾಸ ಇದೆ. ಏಕೆಂದರೆ, ವಿದ್ಯಾಧನವು ಕಳ್ಳರಿಗೆ ಗೋಚರವಾಗು ವುದಿಲ್ಲ; ವೆಚ್ಚಮಾಡಿದರೆ ಕಡಮೆಯಾಗದೆ ಹೆಚ್ಚುವುದು.

78. ಕೊಡುತ್ತೇನೆ ಎಂದು ಹೇಳದೆ ಕೊಡುವವನು ಉತ್ತಮನು; ಹೇಳಿ ಕೊಡುವವನು ಮಧ್ಯಮನು; ಹೇಳಿಯೂ ಕೊಡದವನು ಅಧಮನು.

79. ಮೈಯೆಂಬ ಹುತ್ತಿನಲ್ಲಿರುವ ನಾಲಗೆಯೆಂಬ ಹಾವು ನಿಷ್ಠುರ ವಚನಗಳೆಂಬ ವಿಷವನ್ನು ಕಾರುವಾಗ ಶಮಾಗುಣವು ವಿಷ ವೈದ್ಯನಂತೆ ತಲೆದೋರಬೇಕು.

80. ಲೋಹಗಳಲ್ಲಿ ಶ್ರೇಷ್ಠವಾದುದು ಭಂಗಾರವು; ತೀರ್ಥಗಳಲ್ಲಿ ಶ್ರೇಷ್ಠವಾದುದು ಗಂಗೆ; ಗ್ರಹಗಳಲ್ಲಿ ಶ್ರೇಷ್ಠನು ಸೂರ್ಯನು; ಮನುಷ್ಯರಲ್ಲಿ ಶ್ರೇಷ್ಠನು ಜ್ಞಾನಿ.

81. ಕಾಡಿನಲ್ಲಿ ಬೆಳೆಯುವಂಥವುಗಳೇ ಮರಗಳಲ್ಲ. ಸಭೆಯಲ್ಲಿ ಪುಸ್ತಕ ವನ್ನು ಕೊಟ್ಟು ಓದು ಎಂದರೆ ಓದುವುದಕ್ಕೆ ತಿಳಿಯದೆ ಸುಮ್ಮನೆ ನಿಂತವನೂ ಒಂದು ಮರವೆಂದು ಭಾವಿಸಬೇಕು.

82. ದೊಡ್ಡ ಮನೆತನಕ್ಕಿಂತಲೂ ಸರಿಯಾದ ನಡತೆ ಒಳ್ಳೆಯದು; ದೀರ್ಘವಾದ ರೋಗಕ್ಕಿಂತಲೂ ಸಾವು ಒಳ್ಳೆಯದು; ಸುಗುಣೆ ಯಲ್ಲದ ಹೆಂಡತಿಯೊಡನೆ ಇರುವುದಕ್ಕಿಂತಲೂ ಬ್ರಹ್ಮ ಚಾರಿಯಾಗಿರುವುದೇ ಒಳ್ಳೆಯದು.

83. ದೊರೆತನವೂ ವಿದ್ವತ್ತೂ ಎಂದಿಗೂ ಸಮಾನವಾಗುವುದಿಲ್ಲ. ಏಕೆಂದರೆ, ದೊರೆ ತನ್ನ ದೇಶದಲ್ಲಿ ಮಾತ್ರ ಗೌರವಿಸಲ್ಪಡುವನು; ವಿದ್ವಾಂಸನು ಯಾವ ಸೀಮೆಗೆ ಹೋದರೂ ಮರ್ಯಾದೆಯನ್ನು ಹೊಂದುವನು.

84. ಅನುಭವಿಸದೆ ಇರುವ ಧನವಿದ್ದೇನು ಫಲ? ಒಣಗಿದ ಪೈರಿಗೆ ಬಾರದೆ ಇದ್ದ ಮಳೆ ಬಂದೇನು ಫಲ? ಕಷ್ಟಕಾಲದಲ್ಲಿ ವಿಚಾರಿಸದ ನಂಟನಿದ್ದೇನು ಫಲ?

85. ಸಜ್ಜನರನ್ನು ಕಾಣುವುದೂ ಒಳ್ಳೆಯದು; ಅವರ ಮಾತುಗಳನ್ನು ಕೇಳುವುದೂ ಒಳ್ಳೆಯದು; ಅವರ ಗುಣಗಳನ್ನು ಹೇಳುವುದೂ ಒಳ್ಳೆಯದು; ಅವರ ಸಹವಾಸವನ್ನು ಮಾಡುವುದು ಬಹಳ ಒಳ್ಳೆಯದು.

86. ದುರ್ಜನರನ್ನು ನೋಡುವುದೂ ಕೆಟ್ಟುದು; ಅವರ ಮಾತುಗಳನ್ನು ಕೇಳುವುದೂ ಕೆಟ್ಟುದು; ಅವರ ಗುಣಗಳನ್ನು ಹೇಳುವುದೂ ಕೆಟ್ಟುದು; ಅವರ ಸ್ನೇಹವನ್ನು ಮಾಡುವುದು ಬಹಳ ಕೆಟ್ಟುದು.

87. ಸುಗುಣೆಯಾದ ಹೆಂಡತಿ ಮನೆಯಲ್ಲಿದ್ದರೆ ಇಲ್ಲದ ಪದಾರ್ಥವು ಯಾವುದೂ ಇಲ್ಲ; ಅವಳ ಸ್ವಭಾವವು ಕೆಟ್ಟುದಾದರೆ ಮನೆ ಯನ್ನು ಒಂದು ಹುಲಿಯ ಗವಿಯೆಂದು ಭಾವಿಸಬೇಕು.

88. ಆಕಾಶಕ್ಕೆ ಸೂರ್ಯನೂ, ರಾತ್ರಿಗೆ ಚಂದ್ರನೂ, ವಂಶಕ್ಕೆ ಸತ್ಪುತ್ರನೂ, ಕೊಳಕ್ಕೆ ಕಮಲಗಳೂ, ಸ್ತ್ರೀಗೆ ಪಾತಿವ್ರತ್ಯವೂ, ಸಭೆಗೆ ವಿದ್ವಾಂಸನೂ ಭೂಷಣಗಳೆಂದು ತಿಳಿಯಬೇಕು.

89. ಆಕಾರದಲ್ಲಿ ಚಿಕ್ಕವರೆಂದು ಒಬ್ಬರನ್ನು ಅಲಕ್ಷ್ಯ ಮಾಡಬಾರದು. ಏಕೆಂದರೆ, ಕೊಳದ ನೀರಿಗೆ ಒಂದು ಸಣ್ಣ ಕಪ್ಪೆ ದುಮುಕಿದರೂ ದೊಡ್ಡ ಆನೆಯ ನೆಳಲು ಕಾಣುವುದಿಲ್ಲ.

90. ಮೂರ್ಖರಿಗೆ ತಿಳಿದವರ ಮಾತು ವಿಷವು; ದುರ್ಜನರಿಗೆ ಧರ್ಮವು ವಿಷವು; ಬಾಳೆಯ ಮರಕ್ಕೆ ತಾನು ಬಿಡುವ ಗೊನೆಯೇ ಮೃತ್ಯು; ಮನೆಗೆ ದುಷ್ಟಳಾದ ಹೆಂಗಸೇ ಮೃತ್ಯು.

91. ಪ್ರಜೆಗಳನ್ನು ಕ್ರಮವಾಗಿ ಪರಿಪಾಲನೆ ಮಾಡುವವನೇ ದೊರೆ; ತಾಯಿತಂದೆಗಳನ್ನು ಸಲಹುವವನೇ ಧಾರ್ಮಿಕನು; ಭಯ ವಿಲ್ಲದವನೇ ವೀರನು; ಆಚಾರವುಳ್ಳವನೇ ಬ್ರಾಹ್ಮಣನು.

92. "ನಾವು ಈಗ ಚಿಕ್ಕವರು, ದೊಡ್ಡವರಾದ ಮೇಲೆ ಧರ್ಮವನ್ನು ಮಾಡುವ" ಎಂದು ಸುಮ್ಮನೆ ಇರಬಾರದು. ಏಕೆಂದರೆ, ಬಿರುಗಾಳಿ ಬೀಸಿದರೆ ಹಣ್ಣಲ್ಲದೆ ಕಾಯೂ ಉದಿರುವುದುಂಟು.

93. ತಾನು ಕೆಟ್ಟರೂ ಯೋಗ್ಯರಿಗೆ ಕೇಡೆಣಿಸಬಾರದು; ದೇಹವು ಹಸಿವಿನಿಂದ ಕೃಶವಾದರೂ ಉಣ್ಣದೆ ಇರತಕ್ಕ ಸ್ಥಳದಲ್ಲಿ ಊಟ ಮಾಡಬಾರದು; ವಿಶೇಷವಾದ ಲಾಭವಿದ್ದರೂ ಸುಳ್ಳು ಹೇಳಬಾರದು.

94. ಮಕ್ಕಳು ಹುಟ್ಟಿ ಹುಟ್ಟಿ ಸಾಯುವುದಕ್ಕಿಂತಲೂ ಹುಟ್ಟದೆ ಇರುವುದು ಲೇಸು; ಕೆಟ್ಟ ವಾಹನಕ್ಕಿಂತಲೂ ನಡೆಯುವುದು ಲೇಸು; ತಿಳಿದೂ ತಿಳಿಯದೆ ಇರುವುದಕ್ಕಿಂತಲೂ ಏನೂ ತಿಳಿಯದೆ ಇರುವುದು ಲೇಸು; ದುಷ್ಟ ಭಾರ್ಯೆಗಿಂತಲೂ ಸನ್ಯಾಸಾಶ್ರಮವು ಲೇಸು.

95. ದುರ್ಜನನನ್ನೂ, ಭಂಗಾರವನ್ನೂ, ಭೇರಿಯನ್ನೂ, ದುಷ್ಟ ವಾಹನವನ್ನೂ, ಕಬ್ಬನ್ನೂ, ಎಳ್ಳನ್ನೂ ಮರ್ದನಮಾಡುವುದ ರಿಂದ ಗುಣವೃದ್ಧಿಯಾಗುವುದು.

96. ಹೇಳಿದ ಮಾತನ್ನು ಕೇಳದವನು ಮಗನೇ? ಸೈರಣೆಯಿಲ್ಲದವನು ಮುನಿಯೇ? ಯುದ್ಧಕ್ಕಾಗದವನು ಬಂಟನೇ? ಕಷ್ಟಕಾಲದಲ್ಲಿ ಆಗದವನು ನಂಟನೇ?

97. ಹಣದ ವಿಷಯದಲ್ಲಿ ತಮಗಿಂತಲೂ ದರಿದ್ರರಾಗಿರುವವರನ್ನು ನೋಡಿ ತಮ್ಮ ಆಸ್ತಿ ಹೆಚ್ಚಾಗಿದೆ ಎಂದು ಸಂತೋಷಿಸಬೇಕು. ವಿದ್ಯಾ ವಿಷಯದಲ್ಲಿ ತಮಗಿಂತಲೂ ಹೆಚ್ಚಾಗಿ ಕಲಿತವರನ್ನು ನೋಡಿ ತಮ್ಮ ವಿದ್ಯೆ ಬಹಳ ಸ್ವಲ್ಪವೆಂದು ಗರ್ವವನ್ನು ಬಿಟ್ಟು ವಿದ್ಯೆಯಲ್ಲಿ ವಿಶೇಷವಾದ ಆಸಕ್ತಿಯನ್ನು ಇಡಬೇಕು.

98. ಒಬ್ಬನು ಭಾಗ್ಯವಂತನಾಗಿರುವಾಗ ಅವನಿಗೆ ಆಕಾಶದಲ್ಲಿರುವ ನಕ್ಷತ್ರಗಳಷ್ಟು ಬಂಧುಗಳು ಉಂಟಾಗುವರು. ಅವನೇ ಬಡವನಾದಾಗ "ಇವನು ನಮ್ಮ ಬಂಧು" ಎಂಬವರೇ ಇಲ್ಲ.

99. ಧರ್ಮಮಾರ್ಗವನ್ನು ತಿಳಿಯಿರಿ; ಪರರು ಹೇಳುವ ನಿಷ್ಠುರದ ಮಾತುಗಳನ್ನು ಸೈರಿಸಿರಿ; ವಂಚನೆಯನ್ನು ಬಿಡಿರಿ; ದುಷ್ಟರ ಸ್ನೇಹವನ್ನು ಮಾಡಬೇಡಿರಿ; ದೊಡ್ಡವರ ಬುದ್ಧಿವಾದವನ್ನು ಕೇಳಿರಿ.

100. ನೀರಿನ ಗುಣವು ಒಳ್ಳೆಯ ನೆಲದಿಂದಲೂ, ಹಣಗಾರರ ಗುಣವು ತ್ಯಾಗದಿಂದಲೂ, ಕಣ್ಣಿನ ಗುಣವು ದಯಾರಸದಿಂದಲೂ, ಹೆಂಗಸಿನ ಗುಣವು ಪಾತಿವ್ರತ್ಯಕ್ಕೆ ಕುಂದುಬಾರದ ನಡತೆಯಿಂದಲೂ ಪ್ರಕಾಶವನ್ನು ಹೊಂದುವುವು.

101. ವಿದ್ಯೆಗೆ ಪಾರವೇ ಇಲ್ಲ; ಕಲಿಯುವವರ ದಿವಸಗಳು ಬಹಳ ಸ್ವಲ್ಪವಾಗಿವೆ; ರೋಗಗಳು ಅನೇಕವಾಗಿವೆ. ಆದುದರಿಂದ ಚೆನ್ನಾಗಿ ಆಲೋಚಿಸಿ ಹಾಲನ್ನೂ ನೀರನ್ನೂ ಬೇರ್ಪಡಿಸುವ ಹಂಸಪಕ್ಷಿಯ ಹಾಗೆ ಸಾರಾಸಾರಗಳನ್ನು ತಿಳಿದು ಕಲಿಯತಕ್ಕವುಗಳನ್ನೇ ಕಲಿಯಬೇಕು.

102. ತನಗೆ ಆಪ್ತರಲ್ಲದವರ ಮನೆಯಲ್ಲಿ ಚಿನ್ನದ ಪಾತ್ರದಲ್ಲಿ ಸಣ್ಣಕ್ಕಿಯ ಅನ್ನವನ್ನು ಭುಜಿಸುವುದಕ್ಕಿಂತಲೂ ಆಪ್ತರ

ಮನೆಯಲ್ಲಿ ಉಪ್ಪಿಲ್ಲದ ಗಂಜಿಯನ್ನು ಕುಡಿಯುವುದು ಮನಸ್ಸಿಗೆ ಹಿತಕರವು.

103. ಒಬ್ಬನು ಭಾಗ್ಯವಂತನಾಗಿದ್ದಾಗ ಅವನ ಸುಖಗಳಿಗೆ ಭಾಗಿಗಳಾಗಿದ್ದ ನಂಟರು ಕಷ್ಟಕಾಲದಲ್ಲಿ ಅವನ ದುಃಖಕ್ಕೂ ಭಾಗಿಗಳಾಗುವುದಕ್ಕಿಂತಲೂ ಬೇರೆ ಉಪಕಾರವು ಇನ್ನೇನಿರುವುದು ?

104. ಬಾಲ್ಯದಲ್ಲಿ ತಂದೆ ವಿದ್ಯೆಯನ್ನು ಕಲಿಯುವಂತೆ ಎಷ್ಟು ಹೇಳಿದರೂ ಅಸಡ್ಡೆ ಮಾಡಿ ಕಲಿಯದ ಮೂಢನು ಸಭೆಯಲ್ಲಿ ಓದುವಂತೆ ಒಂದು ಪತ್ರವನ್ನು ಕೊಟ್ಟರೆ ದೊಣ್ಣೆಯನ್ನು ತೆಗೆದುಕೊಳ್ಳುವುದಕ್ಕೆ ಹೇಸನು.

105. ಬರಬೇಕಾದಾಗ ಮಳೆ ಬಾರದೆ ಹೋದರೆ, ಸಮುದ್ರವು ಮುಂದಕ್ಕೆ ಒತ್ತಿ ಬಂದರೆ, ಮನುಷ್ಯರು ಮಾಡತಕ್ಕ ಕೆಲಸವನ್ನು ಮಾಡದೆ ಬಿಟ್ಟರೆ, ಉತ್ತಮರು ಭಾಷೆಗೆ ತಪ್ಪಿದರೆ ಲೋಕವು ಜೀವಿಸುವುದು ಹೇಗೆ?

106. ಮೂಢರ ಸ್ನೇಹಕ್ಕಿಂತಲೂ ವೈರವೇ ಒಳ್ಳೆಯದು. ಮನಸ್ಸನ್ನು ನಿರಂತರವಾಗಿ ನೋಯಿಸುವುದಕ್ಕಿಂತಲೂ ಕೊಲ್ಲುವುದೇ ಒಳ್ಳೆಯದು. ಇಲ್ಲದ ಗುಣಗಳನ್ನು ಹೇಳುವುದಕ್ಕಿಂತಲೂ ಬೈಯ್ಯುವುದೇ ಒಳ್ಳೆಯದು.

107. ದೊಡ್ಡವರಿಗೆ ಇಂದ್ರಪದವಿ ಬಂದರೂ ಅಹಂಕಾರದ ಮಾತುಗಳನ್ನಾಡುವುದಿಲ್ಲ. ನೀಚರಿಗೆ ಒಂದು ಹೊತ್ತಿನ ಆಹಾರವು ಸಿಕ್ಕಿದರೆ ಕುಬೇರನಿಗಿಂತ ತಾವು ಹೆಚ್ಚಿನವರೆಂದು ಭಾವಿಸುವರು.

108. ಕಣ್ಣು ಕಾಣದವನಿಗೆ ಕನ್ನಡಿಯೇಕೆ? ಗಾಣದ ಎತ್ತಿಗೆ ಗೆಜ್ಜೆಯೇಕೆ? ಗೋಣಿಗೆ ಗವಸಣಿಗೆ ಏಕೆ? ಕಳ್ಳರಿಗೆ ಸತ್ಯವ್ರತವೇತಕ್ಕೆ?

109. ದೊರೆ ಕುಮಂತ್ರಿಯಿಂದಲೂ, ಮಗನು ಲಾಲನೆಯಿಂದಲೂ, ಯತಿ ಆಶೆಯಿಂದಲೂ ಕೆಡುತ್ತಾರೆ. ವಂಶವು ಕುಪುತ್ರ

ನಿಂದಲೂ, ಶೀಲವು ದುಷ್ಟರ ಅನುವರ್ತನದಿಂದಲೂ, ವ್ಯವಸಾಯವು ನೋಡದೆ ಇರುವುದರಿಂದಲೂ ಕೆಡುವುವು.

110. ತಂದೆಯನ್ನು ಒಳ್ಳೆಯ ನಡತೆಯಿಂದ ಸಂತೋಷಪಡಿಸುವವನೇ ಮಗನು. ಗಂಡನ ಹಿತವನ್ನು ಚಿಂತಿಸುತ್ತ ಅವನ ಇಷ್ಟಾನುಸಾರವಾಗಿ ನಡೆಯುವವಳೇ ಹೆಂಡತಿ. ಸುಖದಲ್ಲಿಯೂ ದುಃಖದಲ್ಲಿಯೂ ಏಕಪ್ರಕಾರವಾಗಿರುವವನೇ ಸ್ನೇಹಿತನು.

111. ಹೂ ಬಿಡದೆಯೇ ಫಲಿಸುವ ಮರಗಳಂತೆ ಹೇಳದಿದ್ದರೂ ಅಭಿಪ್ರಾಯವನ್ನು ತಿಳಿದುಕೊಳ್ಳುವವರೂ ಕೆಲವರಿರುವರು. ಬಿತ್ತಿದರೂ ಪೈರಾಗದ ಬೀಜಗಳಂತೆ ಹೇಳಿದರೂ ತಿಳಿದುಕೊಳ್ಳಲಾರದವರೂ ಇರುವರು.

112. ನರಿಗಳು ಊರನ್ನು ಸೇರುತ್ತವೆಯೇ? ಸೂರ್ಯನ ಬೆಳಕಿಗೆ ಗೂಗೆಗಳು ಬರುತ್ತವೆಯೇ? ಜಾರ ಚೋರರಿಗೆ ಬೆಳುದಿಂಗಳು ಇಷ್ಟವೇ? ದುಷ್ಟರಿಗೆ ಧರ್ಮವಿಚಾರವು ಬೇಕಾಗಿದೆಯೇ?

113. ಅರಳಿ ಪುನಃ ಮೊಗ್ಗಾಗದ ಮರದ ಹೂವಿನ ಹಾಗೆ ಸಂಕೋಚವನ್ನು ಹೊಂದದೆ ಏಕರೀತಿಯಾಗಿರುವ ಸ್ನೇಹವೇ ಸ್ನೇಹವು; ಹಾಗಿಲ್ಲದೆ ವಿಕಸಿತವಾಗಿ ಪುನಃ ಮುಕುಳಿತವಾಗುವ ನೀರಿನ ಹೂಗಳ ಹಾಗೆ ಒಂದೇ ರೀತಿಯಾಗಿಲ್ಲದಿರುವ ಸ್ನೇಹವು ಸ್ನೇಹವಲ್ಲ.

114. ಬೆಂಕಿಯನ್ನು ನೀರಿನಿಂದಲೂ, ಬಿಸಿಲನ್ನು ಕೊಡೆಯಿಂದಲೂ, ಆನೆಯನ್ನು ಅಂಕುಶದಿಂದಲೂ, ಕತ್ತೆಯನ್ನೂ ಎತ್ತನ್ನೂ ದೊಣ್ಣೆಯಿಂದಲೂ, ವ್ಯಾಧಿಯನ್ನು ಔಷಧದಿಂದಲೂ ಅಡಗಿಸಬಹುದು, ಮೂರ್ಖನನ್ನು ಅಡಗಿಸುವುದಕ್ಕೆ ಯಾವ ಔಷಧವೂ ಇಲ್ಲ.

115. ಉತ್ತಮರು ಅನೇಕ ವಿಘ್ನಗಳು ಬಂದರೂ ಆರಂಭಿಸಿದ ಕೆಲಸವನ್ನು ಬಿಡುವುದಿಲ್ಲ; ಮಧ್ಯಮರು ವಿಘ್ನಗಳು ಬಂದಾಗ

ಬಿಟ್ಟುಬಿಡುವರು; ಅಧಮರು ವಿಘ್ನಗಳು ಬರುವುವೆಂಬ ಭಯದಿಂದ ಆರಂಭಿಸುವುದೇ ಇಲ್ಲ.

116. ಅಧಮರಿಗೆ ಕೋಪ ಬಂದರೆ ಒಡೆದುಹೋದ ಕಲ್ಲಿನ ಚೂರುಗಳ ಹಾಗೆ ಪುನಃ ಸೇರುವುದಿಲ್ಲ. ಮಧ್ಯಮರು ಬಂಗಾರದ ಚೂರುಗಳ ಹಾಗೆ ಪುನಃ ಸುಲಭವಾಗಿ ಸೇರಬಲ್ಲರು. ಉತ್ತಮರು ನೀರಿನ ಭಾಗಗಳು ಸೇರುವ ಹಾಗೆ ಆ ಕ್ಷಣವೇ ಕೋಪವನ್ನು ಮರೆತು ಸೇರುವರು.

117. ಸುಮ್ಮನೆ ಸ್ನಾನಮಾಡುವುದರಿಂದ ಪ್ರಯೋಜನವಿಲ್ಲ; ಮೀನು ಯಾವಾಗಲೂ ನೀರಿನಲ್ಲಿಯೇ ಇರುತ್ತದೆ. ಬರಿಯ ಧ್ಯಾನ ದಿಂದಲೂ ಫಲವಿಲ್ಲ; ಬಕವು ಮೀನು ಬರಲಿಲ್ಲವೆಂದು ಧ್ಯಾನ ಮಾಡುತ್ತಿದೆ. ಕಾಡಿಗೆ ಹೋಗುವುದರಿಂದಲೂ ಗುಣವಿಲ್ಲ; ವಾನರಗಳು ಅಲ್ಲಿಯೇ ಇವೆ. ಇವೆಲ್ಲಾ ಇಲ್ಲದಿದ್ದರೂ ಮನಸ್ಸು ಶುದ್ಧವಾಗಿದ್ದರೆ ಎಲ್ಲವೂ ಇದ್ದಹಾಗೆ.

118. ಒಂದು ವಿಷಯವನ್ನು ಕುರಿತು ಆಲೋಚಿಸುವಾಗ ಕೋಪ ವನ್ನೂ ಪಕ್ಷಪಾತವನ್ನೂ ಬಿಡಬೇಕು. ಕೋಪವಿದ್ದರೆ ವಿಷಯದ ನಿಜ ಸ್ವಭಾವವು ತಿಳಿಯುವುದಿಲ್ಲ. ಪಕ್ಷಪಾತದಿಂದ ದೋಷಗಳು ಕಾಣದೆ ಹೋಗುವುವು.

119. ಸೇವಕನಾಗಿರುವುದು ಬಹಳ ಕಷ್ಟವು. ವಿಶೇಷವಾಗಿ ಮಾತನಾ ಡದೆ ಇದ್ದರೆ ಮೂಗನೆಂದೂ, ಚೆನ್ನಾಗಿ ಮಾತನಾಡಿದರೆ ಬಾಯಿಬಡುಕನೆಂದೂ, ಹತ್ತಿರ ಬಂದರೆ ಅಹಂಕಾರಿಯೆಂದೂ, ದೂರದಲ್ಲಿದ್ದರೆ ಮುಟ್ಠಾಳನೆಂದೂ, ಸೈರಣೆಯುಳ್ಳವನಾದರೆ ಹೇಡಿಯೆಂದೂ ಕರೆಯುತ್ತಾರೆ.

120. ತಮ್ಮ ಪ್ರಯೋಜನವನ್ನು ಬಿಟ್ಟು ಪರರ ಸುಖಕ್ಕಾಗಿ ಕಷ್ಟ ಪಡುವವರು ಉತ್ತಮರು. ತಮ್ಮ ಪ್ರಯೋಜನಕ್ಕೆ ಕುಂದು ಬಾರದಂತೆ ಪರರ ಕೆಲಸವನ್ನು ಮಾಡುವವರು ಮಧ್ಯಮರು. ತಮ್ಮ ಪ್ರಯೋಜನಕ್ಕೋಸ್ಕರ ಇತರರಿಗೆ ಕೇಡುಂಟುಮಾಡು ವವರು ಅಧಮರು. ನಿರರ್ಥಕವಾಗಿ ಪರರಿಗೆ ಕೇಡುಂಟು ಮಾಡುವವರು ಅಧಮಾಧಮರು.

## ೩ ನೆಯ ಭಾಗ

1. ಚಿಕ್ಕವಯಸ್ಸಿನಲ್ಲಿಯೇ ವಿದ್ಯೆಯನ್ನು ಚೆನ್ನಾಗಿ ಕಲಿಯಬೇಕು. ವಯಸ್ಸಾದಮೇಲೆ ಮನಸ್ಸಿಗೆ ಯೋಚನೆಗಳು ಉಂಟಾಗುವುದರಿಂದ ವಿದ್ಯೆ ಸರಿಯಾಗಿ ಹಿಡಿಯುವುದಿಲ್ಲ.

   ಹೇಗೆಂದರೆ, ಕೊಳೆಯಿಲ್ಲದ ಬಟ್ಟೆಗೆ ಬಣ್ಣವು ಚೆನ್ನಾಗಿ ಹತ್ತುವುದು; ಕೊಳೆಯಾದ ಬಟ್ಟೆಗೆ ಹತ್ತುವುದಿಲ್ಲ.

2. ಬಾಲ್ಯದಲ್ಲಿ ಕಷ್ಟಪಟ್ಟು ವಿದ್ಯೆಯನ್ನು ಕಲಿತವರು ಅನಂತರ ಎಲ್ಲರಿಂದಲೂ ಗೌರವಿಸಲ್ಪಡುವರು.

   ಹೇಗೆಂದರೆ, ಎಳೆಯದಾಗಿರುವಾಗ ಬೊಗ್ಗಿಸಲ್ಪಟ್ಟ ಬಿದಿರು ಪಾಲಕಿಗಳಿಗೆ ಉಪಯೋಗಿಸಲ್ಪಟ್ಟು, ಅರಸರ ಕಿರೀಟದ ಮೇಲೆ ಇರುತ್ತದೆ.

3. ವಿದ್ಯಾವಂತನು ಸುಂದರನಲ್ಲದಿದ್ದರೂ ಎಲ್ಲರಿಗೂ ಇಷ್ಟನಾಗುವನು. ವಿದ್ಯೆಯಿಲ್ಲದವನು ಸುಂದರನಾದರೂ ಇಷ್ಟನಾಗುವುದಿಲ್ಲ.

   ಹೇಗೆಂದರೆ, ವಾಸನೆಯುಳ್ಳ ಲಾವಂಚದ ಬೇರು ಚಂದವಿಲ್ಲದಿದ್ದರೂ ಎಲ್ಲರಿಗೂ ಬೇಕಾಗಿರುತ್ತದೆ. ನಿರ್ಗಂಧವಾದ ಮುತ್ತಗದ ಹೂ ಅಂದವಾಗಿದ್ದರೂ ಯಾರಿಗೂ ಬೇಕಾಗುವುದಿಲ್ಲ.

4. ಓದಿದವರು ಓದಿದವರನ್ನೇ ಬಯಸುವರು. ಮೂರ್ಖರು ಮೂರ್ಖರಲ್ಲಿಯೇ ಸೇರುವರು.

   ಹೇಗೆಂದರೆ, ತಾವರೆಗೊಳದಲ್ಲಿ ಹಂಸವು ಬಂದು ಸೇರುವುದು. ಬೇವಿನಮರದಲ್ಲಿ ಕಾಗೆ ಸೇರುವುದು.

5. ಲೋಕದಲ್ಲಿ ಒಳ್ಳೆಯವರು ಬಹಳ ಕಡಮೆಯಾಗಿದ್ದಾರೆ; ಕೆಟ್ಟವರು ಅನೇಕರಿದ್ದಾರೆ.

   ಹೇಗೆಂದರೆ, ರತ್ನದ ಕಲ್ಲುಗಳು ಸ್ವಲ್ಪವಾಗಿವೆ; ಇತರವಾದ ಕಲ್ಲುಗಳು ಬೇಕಾದಷ್ಟು ಇವೆ.

6. ಒಂದೇ ತಾಯ ಹೊಟ್ಟೆಯಲ್ಲಿ ಅನೇಕರು ಹುಟ್ಟಿದರೂ ಒಬ್ಬರ ಗುಣವು ಮತ್ತೊಬ್ಬರಿಗೆ ಬರುವುದಿಲ್ಲ.

ಹೇಗೆಂದರೆ, ಒಂದೇ ಕೊಳದಲ್ಲಿ ಹುಟ್ಟಿದ ಹೂಗಳಲ್ಲಿ ಒಂದರಹಾಗೆ ಮತ್ತೊಂದು ಇರುವುದಿಲ್ಲ.

7. ದೊಡ್ಡವರು ಉನ್ನತ ಸ್ಥಿತಿಯಿಂದ ಜಾರಿದರೆ ಬಹಳ ಸಂಕಟವನ್ನು ಹೊಂದುವರು; ಅಲ್ಪರು ಲಕ್ಷ್ಯಮಾಡುವುದಿಲ್ಲ.

ಹೇಗೆಂದರೆ, ಆನೆ ಹಳ್ಳಕ್ಕೆ ಬಿದ್ದರೆ ಬಹಳ ಶ್ರಮಪಡುವುದು; ಇರುವೆ ಬಿದ್ದರೆ ಅದಕ್ಕೇನಾಗುವುದು?

8. ಸಜ್ಜನರಿಗೆ ಉಪಕಾರಮಾಡಿದರೆ ಪ್ರತ್ಯುಪಕಾರಮಾಡುತ್ತಾರೆ. ದುರ್ಜನರಿಗೆ ಮಾಡಿದರೆ ಅಪಕಾರಮಾಡುತ್ತಾರೆ.

ಹೇಗೆಂದರೆ, ಹಸುವಿಗೆ ಆಹಾರವನ್ನು ಕೊಟ್ಟರೆ ಮಧುರವಾದ ಹಾಲನ್ನು ಕೊಡುತ್ತದೆ; ಹಾವಿಗೆ ಹಾಲನ್ನು ಕೊಟ್ಟರೆ ಕ್ರೂರವಾದ ವಿಷವನ್ನು ಕಾರುತ್ತದೆ.

9. ಬುದ್ಧಿವಂತನು ದೂರದಿಂದ ಬಂದ್ದಾದರೂ ಒಬ್ಬನಲ್ಲಿರುವ ಗುಣಗಳನ್ನು ಗ್ರಹಿಸುತ್ತಾನೆ; ಮೂಢನು ಸಮೀಪದಲ್ಲಿರುವವನಲ್ಲಿಯೂ ಗುಣವನ್ನು ಗ್ರಹಿಸಲಾರನು.

ಹೇಗೆಂದರೆ, ತುಂಬಿ ದೂರದಿಂದ ಬಂದು ತಾವರೆಯ ಮಕರಂದವನ್ನು ಸವಿನೋಡುತ್ತದೆ; ಕಪ್ಪೆ ಸಮೀಪದಲ್ಲಿದ್ದರೂ ಏನೂ ಅರಿಯದು.

10. ಮಾನವುಳ್ಳವನು ದೊಡ್ಡ ಕೆಲಸಗಳನ್ನೇ ಮಾಡುತ್ತಾನೆ; ಮಾನವಿಲ್ಲದವನು ಅಲ್ಪ ಕೆಲಸವನ್ನು ಮಾಡಿ ಅಧಿಕ ಸಂತೋಷವನ್ನು ಹೊಂದುತ್ತಾನೆ.

ಹೇಗೆಂದರೆ, ಸಿಂಹವು ಆನೆಯ ಮಾಂಸವನ್ನೇ ತಿನ್ನುತ್ತದೆ; ನಾಯಿ ನಾತವುಳ್ಳ ಮೂಳೆಯನ್ನು ಕಚ್ಚಿಕೊಂಡು ಕುಣಿದಾಡುತ್ತದೆ.

11. ಒಳ್ಳೆಯವರ ಸಹವಾಸದಿಂದ ಒಳ್ಳೆಯ ಗುಣಗಳು ಉಂಟಾಗುತ್ತವೆ; ಕೆಟ್ಟವರ ಸಂಗದಿಂದ ಕೆಟ್ಟ ಗುಣಗಳು ಹುಟ್ಟುತ್ತವೆ.

ಹೇಗೆಂದರೆ, ಮಳೆಯನೀರು ಒಳ್ಳೆಯ ಮರಳಿನಲ್ಲಿ ಬಿದ್ದರೆ

ಮಧುರವಾಗುತ್ತದೆ; ಉಪ್ಪು ಮರಳಿನಲ್ಲಿ ಬಿದ್ದರೆ ಉಪ್ಪು ನೀರಾಗುತ್ತದೆ.

12. ತಾನು ಅನುಭವಿಸದೆ ಕೂಡಹಾಕಿದ ಹಣವು ಅನ್ಯರ ಪಾಲಾಗುತ್ತದೆ.

ಹೇಗೆಂದರೆ, ಜೇನುಹುಳುಗಳು ತಾವು ಕುಡಿಯದೆ ಕೂಡಹಾಕಿದ ಜೇನು ಪರರ ಕೈಸೇರುತ್ತದೆ.

13. ಒಬ್ಬನಲ್ಲಿ ಹಣವಿದ್ದಾಗ ಎಲ್ಲರೂ ಬಂದು ಸೇರುತ್ತಾರೆ; ಇಲ್ಲದ ಕಾಲದಲ್ಲಿ ಯಾರೂ ಬರುವುದಿಲ್ಲ.

ಹೇಗೆಂದರೆ, ಕೆರೆಯಲ್ಲಿ ನೀರಿದ್ದಾಗ ಜಲ ಪಕ್ಷಿಗಳು ಅಲ್ಲಿಯೇ ವಾಸಮಾಡುತ್ತವೆ; ನೀರಿಲ್ಲದಾಗ ಯಾವುವೂ ಬರುವುದಿಲ್ಲ.

14. ಸತ್ಪುರುಷರು ತಾವು ಬಡವರಾಗಿದ್ದರೂ ಪರರಿಗೆ ಉಪಕಾರವನ್ನು ಮಾಡುವರು.

ಹೇಗೆಂದರೆ, ಗಂಧದ ಮರವು ತೇದು ತೇದು ಕೃಶವಾದರೂ ಇತರರಿಗೆ ಸುವಾಸನೆಯನ್ನು ಕೊಡುತ್ತದೆ.

15. ಮಾನವುಳ್ಳವರು ಅಪವಾದಕ್ಕೆ ಅಂಜುವರು; ಮಾನವಿಲ್ಲದವರು ಹೆದರುವುದಿಲ್ಲ.

ಹೇಗೆಂದರೆ, ಸರಿಯಾಗಿರುವ ಕಣ್ಣು ಕತ್ತಲೆಗೆ ಅಂಜುವುದೇ ಹೊರತು ಕುರುಡುಗಣ್ಣು ಅಂಜುವುದಿಲ್ಲ.

16. ಸಜ್ಜನರು ತಮ್ಮನ್ನು ಎಷ್ಟು ತೊಂದರೆಪಡಿಸಿದರೂ, ಹಿತಕರವಾದ ಮಾತನ್ನಾಡುವರೇ ಹೊರತು ನಿಷ್ಠುರವಾದ ಮಾತನ್ನು ಆಡಲಾರರು.

ಹೇಗೆಂದರೆ, ಕಬ್ಬನ್ನು ಕತ್ತರಿಸಿ ತುಂಡುಮಾಡಿ ಜಜ್ಜಿ ಹಿಂಡಿದರೂ ಮಧುರವಾದ ರಸವನ್ನೇ ಕೊಡುವುದು.

17. ಒಳ್ಳೆಯವರ ಸಹವಾಸದಿಂದ ಕೆಟ್ಟವರು ತಮ್ಮ ದುರ್ಗುಣಗಳನ್ನು ಹೋಗಲಾಡಿಸಿಕೊಂಡು ಒಳ್ಳೆಯ ಗುಣಗಳನ್ನು ಹೊಂದುವರು.

ಹೇಗೆಂದರೆ, ನೀರು ಹಾಲಿನೊಡನೆ ಸೇರಿ ಹಾಲಿನಂತೆಯೇ ಆಗುವುದು.

18. ಎಷ್ಟು ಕಷ್ಟಪಟ್ಟು ತಿದ್ದಿದರೂ ಮೂರ್ಖನು ತನ್ನ ಅಂದವನ್ನು ಬಿಡುವುದಿಲ್ಲ.
ಹೇಗೆಂದರೆ, ಇದ್ದಲು ಹಾಲಿನಲ್ಲಿ ಅನೇಕಾವರ್ತಿ ತೊಳೆದರೂ ಬಿಳುಪಾಗುವುದಿಲ್ಲ.

19. ವಿದ್ಯೆಯನ್ನು ಸಂಪಾದಿಸುವ ಕಷ್ಟವು ವಿದ್ವಾಂಸನಿಗೇ ತಿಳಿಯುತ್ತದೆ; ಇತರರಿಗೆ ತಿಳಿಯುವುದಿಲ್ಲ.
ಹೇಗೆಂದರೆ, ಪ್ರಸವವೇದನೆ ಮಕ್ಕಳನ್ನು ಹೆತ್ತವಳಿಗೆ ತಿಳಿದಿದೆಯೇ ಹೊರತು ಬಂಜೆಗೆ ತಿಳಿಯುವುದೇ ?

20. ವಿಶೇಷವಾಗಿ ವಿದ್ಯೆಯನ್ನು ಕಲಿತವರು ಮಿತವಾಗಿ ಮಾತನಾಡುತ್ತಾರೆ; ಏನೂ ತಿಳಿಯದವರ ಮಾತಿಗೆ ಕೊನೆಯೇ ಇಲ್ಲ.
ಹೇಗೆಂದರೆ, ತಾಳೆಯಮರದಲ್ಲಿ ಹಸಿಯಾದ ಎಲೆ ಶಬ್ದಮಾಡುವುದಿಲ್ಲ; ಒಣಗಿದ ಎಲೆ ಬಹಳ ಶಬ್ದವನ್ನು ಮಾಡುತ್ತದೆ.

21. ಸತ್ಪುರುಷರು ಸತ್ಪುರುಷರನ್ನು ನೋಡಿ ಹಿಗ್ಗುತ್ತಾರೆ; ದುಷ್ಟರು ದುಷ್ಟರನ್ನು ಕಂಡು ನಲಿಯುತ್ತಾರೆ.
ಹೇಗೆಂದರೆ, ತಾವರೆ ಸೂರ್ಯನನ್ನು ನೋಡಿ ಅರಳುತ್ತದೆ; ಗೂಗೆ ಕತ್ತಲೆಯನ್ನು ನೋಡಿ ಆನಂದಿಸುತ್ತದೆ.

22. ನಿರ್ದೋಷಿಗಳಾದ ಸತ್ಪುರುಷರೂ ಕೂಡ ನೀಚರ ಸಹವಾಸದಿಂದ ದೋಷಿಗಳೆಂದು ಭಾವಿಸಲ್ಪಡುವರು.
ಹೇಗೆಂದರೆ, ಹಸುವಿನ ಹಾಲಾದರೂ ಈಚಲಮರದ ಅಡಿಯಲ್ಲಿ ಕುಡಿದರೆ, ಹೆಂಡವೆಂದು ತಿಳಿಯಲ್ಪಡುವುದು.

23. ಪಾಪಿಗಳು ಸತ್ಪುರುಷರ ಹಾಗಿದ್ದರೂ ಸತ್ಪುರುಷರಾಗಲಾರರು.
ಹೇಗೆಂದರೆ, ಉಪ್ಪು ಕರ್ಪೂರದ ಹಾಗೆ ಬೆಳ್ಳಗಿದ್ದರೂ ಕರ್ಪೂರವಾಗಲಾರದು.

24. ಸದ್ಗುಣಗಳು ಅನೇಕವಿದ್ದರೂ ಒಂದು ದುರ್ಗುಣವಿದ್ದರೆ ಅವುಗಳನ್ನು ತಗ್ಗಿಸುತ್ತದೆ.
ಹೇಗೆಂದರೆ, ಏಲಕ್ಕಿ, ಸಕ್ಕರೆ, ಕೇಸರಿ, ಬಾದಾಮಿ ಮೊದಲಾದ ಪದಾರ್ಥಗಳನ್ನು ಹಾಕಿರುವ ಪಾಯಸಕ್ಕೆ ಸ್ವಲ್ಪ ಇಂಗು ಹಾಕಿದರೆ ಅವುಗಳ ಗುಣಗಳೆಲ್ಲಾ ಕೆಡುತ್ತವೆ.

25. ಜನರು ಅವರ ಗುಣಗಳಿಗೋಸ್ಕರ ಗೌರವಿಸಲ್ಪಡುತ್ತಾರೆ; ಮನೆತನಕ್ಕೋಸ್ಕರವಲ್ಲ.
ಹೇಗೆಂದರೆ, ಕ್ಷೀರಸಮುದ್ರದಲ್ಲಿ ಹುಟ್ಟಿದರೂ ವಿಷವನ್ನು ಆದರಿಸುವವರು ಯಾರೂ ಇಲ್ಲ.

26. ಮಾನಿಗಳು ತಮ್ಮ ಪ್ರಾಣವನ್ನಾದರೂ ಬಿಟ್ಟು ಮಾನವನ್ನೇ ಕಾಪಾಡಿಕೊಳ್ಳುತ್ತಾರೆ.
ಹೇಗೆಂದರೆ, ಬೆಂಕಿ ಆರಿಹೋಗುತ್ತದೆಯೇ ಹೊರತು ತಣ್ಣಗೆ ಆಗುವುದಿಲ್ಲ.

27. ನೀಚರ ಮನಸ್ಸು ಎಷ್ಟು ಹೇಳಿಕೊಂಡರೂ ಕರಗುವುದಿಲ್ಲ.
ಹೇಗೆಂದರೆ, ನೀರಿನಲ್ಲಿ ಕಲ್ಲನ್ನು ಎಷ್ಟು ದಿವಸ ಮಡಗಿದರೂ ಅದು ಮೆತ್ತಗೆ ಆಗುವುದಿಲ್ಲ.

28. ಮನುಷ್ಯರಿಗೆ ಅವರ ಗುಣಗಳಿಂದ ದೊಡ್ಡತನವೇ ಹೊರತು ಸಿಂಹಾಸನಾದಿಗಳಮೇಲೆ ಕುಳಿತುಕೊಳ್ಳುವುದರಿಂದ ಅಲ್ಲ.
ಹೇಗೆಂದರೆ, ಕಾಗೆ ಉನ್ನತವಾದ ಗೋಪುರದ ಮೇಲೆ ಕುಳಿತುಕೊಂಡರೂ ಗರುಡನಾಗುವುದಿಲ್ಲ.

29. ದೊಡ್ಡವರು ಅಲ್ಪರೊಂದಿಗೆ ಸೇರಿದರೆ ತಮ್ಮ ಗೌರವವನ್ನು ಹೋಗಲಾಡಿಸಿಕೊಳ್ಳುತ್ತಾರೆ.
ಹೇಗೆಂದರೆ, ಕಲ್ಲು ಹಗುರವಾದ ತೆಪ್ಪದಲ್ಲಿ ಸೇರಿ ತನ್ನ ಭಾರವನ್ನು ಕಳೆದುಕೊಂಡು ತೇಲುತ್ತದೆ.

30. ದುಷ್ಟರಲ್ಲಿ ಅಧಿಕ ಭಾಗ್ಯವಿದ್ದರೂ ಅವರ ಹತ್ತಿರ ಹೋಗಬಾರದು; ಹೋದರೆ ಕೇಡುಂಟಾಗುತ್ತದೆ.
ಹೇಗೆಂದರೆ, ಹಾವಿನಲ್ಲಿ ಮಾಣಿಕ್ಯವಿದ್ದರೂ ಅದರ ಸಮೀಪಕ್ಕೆ ಹೋಗಬಾರದು; ಹೋದರೆ ಕಚ್ಚಿ ಕೊಲ್ಲುವುದು.

31. ಸತ್ಪುರುಷರು ತಮ್ಮನ್ನು ನೋಡಿ ನೀಚರು ತುಚ್ಛವಾದ ಮಾತನ್ನಾಡಿದರೆ ಪ್ರತಿಹೇಳುವುದಿಲ್ಲ.
ಹೇಗೆಂದರೆ, ನಾಯಿ ಕಾಲನ್ನು ಕಚ್ಚಿದರೆ ಪ್ರತಿಯಾಗಿ ಅದನ್ನು ಕಚ್ಚುವರುಂಟೆ?

32. ಮೂಢನ ಮಾತುಗಳು ವಿದ್ವಾಂಸನನ್ನು ಕಂಡ ಕೂಡಲೆ ಅಡಗಿ ಹೋಗುತ್ತವೆ.

ಹೇಗೆಂದರೆ, ಮಿಂಚುಹುಳುಗಳ ಪ್ರಕಾಶವು ಚಂದ್ರೋದಯ ವಾದ ಕೂಡಲೆ ಅಡಗಿಹೋಗುತ್ತದೆ.

33. ಬಲವಂತರಿಗೆ ಬೊಗ್ಗಿ ನಡೆಯುವವರು ಸೌಖ್ಯವನ್ನು ಹೊಂದು ತ್ತಾರೆ; ಹಾಗಿಲ್ಲದೆ ಇದಿರಾಗಿ ನಿಂತವರು ಕೇಡನ್ನು ಅನುಭವಿ ಸುವರು.

ಹೇಗೆಂದರೆ, ಪ್ರವಾಹವು ಬಂದಾಗ ಬೊಗ್ಗಿದ ಜೊಂಡು ಅನಂತರ ತಲೆಯೆತ್ತಿಕೊಂಡು ಜೀವಿಸುತ್ತದೆ; ಇದಿರಾಗಿ ನೆಟ್ಟನೆ ನಿಂತ ಮರವು ಮುರಿದು ನಾಶವಾಗುತ್ತದೆ.

34. ತಮ್ಮ ಕೆಲಸಕ್ಕೋಸ್ಕರ ದುಷ್ಟರ ಸಹಾಯವು ಬೇಕಾದರೆ ತಕ್ಕಮಟ್ಟಿಗೆ ಅವರ ಸ್ನೇಹವನ್ನು ಮಾಡಬೇಕು; ಅಧಿಕವಾಗಿ ಮಾಡಿದರೆ ಅಪಾಯವುಂಟಾಗುವುದು.

ಹೇಗೆಂದರೆ, ವೀಳೆಯದೆಲೆಗೆ ಸ್ವಲ್ಪವಾಗಿಯೇ ಸುಣ್ಣವನ್ನು ಸೇರಿ ಸಬೇಕು; ಹೆಚ್ಚಾದರೆ ಬಾಯಿ ಬೆಂದುಹೋಗುತ್ತದೆ.

35. ತಾನು ಕಲಿತ ವಿದ್ಯೆಯನ್ನು ಇತರರಿಗೆ ಹೇಳಿದರೆ ಅದು ಪ್ರಕಾಶ ವನ್ನು ಹೊಂದುವುದು; ಇಲ್ಲದಿದ್ದರೆ ಮಲಿನವಾಗಿ ನಿಷ್ಫಲ ವಾಗುವುದು.

ಹೇಗೆಂದರೆ, ಬಾವಿಯ ನೀರನ್ನು ವೆಚ್ಚಮಾಡುತ್ತ ಬಂದರೆ ಅದು ಪರಿಶುದ್ಧವಾಗಿರುವುದು; ಇಲ್ಲದಿದ್ದರೆ ಕೆಟ್ಟ ನಾತವನ್ನು ಹೊಂದಿ ನಿಷ್ಪ್ರಯೋಜನವಾಗುವುದು.

36. ಸಜ್ಜನರು ತಮಗೆ ಮಾಡಿದ ಉಪಕಾರವನ್ನು ಯಾವಾಗಲೂ ಸ್ಮರಿಸುವರು; ದುರ್ಜನರು ಆಕ್ಷಣವೇ ಮರೆತುಬಿಡುವರು.

ಹೇಗೆಂದರೆ, ಕಲ್ಲಿನಮೇಲೆ ಕೆತ್ತಿದ ಅಕ್ಷರವು ನೆಲೆಯಾಗಿ ನಿಲ್ಲು ವುದು. ನೀರಿನಮೇಲೆ ಬರೆದುದು ಆಗಲೇ ಕೆಡುವುದು.

37. ಬಲಶಾಲಿಗಳನ್ನು ಆಶ್ರಯಿಸಿದವರು ತಾವು ದುರ್ಬಲರಾದರೂ ಬಲವುಳ್ಳ ಶತ್ರುಗಳನ್ನು ಲಕ್ಷ್ಯಮಾಡುವುದಿಲ್ಲ.

ಹೇಗೆಂದರೆ, ಶಿವನ ಜಡೆಯಲ್ಲಿರುವ ಹಾವು ಗರುಡನನ್ನು ನೋಡಿ ಹೆದರುವುದೇ ?

38. ಸಜ್ಜನರು ದೋಷವಿದ್ದರೂ ಗುಣವನ್ನೇ ನೋಡಿ ಸಂತೋಷ ಪಡುವರು ; ದುರ್ಜನರು ಗುಣವಿದ್ದರೂ ದೋಷವನ್ನೇ ಹುಡುಕುವರು.

ಹೇಗೆಂದರೆ, ತೋಟದಲ್ಲಿ ತುಂಬಿ ಹೂಗಳ ಮಧುವನ್ನೇ ಪಾನ ಮಾಡುವುದು ; ಕಾಗೆ ಕಹಿಯಾದ ಬೇವಿನಹಣ್ಣನ್ನೇ ತಿಂದು ನಲಿಯುವುದು.

39. ಸಜ್ಜನರೂ ದುರ್ಜನರೂ ತಮ್ಮ ತಮ್ಮ ಗುಣಗಳಲ್ಲಿ ಯಾವಾಗಲೂ ವ್ಯತ್ಯಾಸವನ್ನು ಹೊಂದುವುದಿಲ್ಲ.

ಹೇಗೆಂದರೆ, ಸಕ್ಕರೆ ಯಾರು ತಿಂದರೂ ರುಚಿಯಾಗಿಯೇ ಇರುವುದು ; ಬೇವಿನಹಣ್ಣು ದೇವತೆಗಳಿಗೂ ಕಹಿಯೇ ಹೊರತು ಸಿಹಿಯಲ್ಲ.

40. ನೀಚನಿಗೆ ಐಶ್ವರ್ಯವು ಬಂದರೂ ಅವನ ಗುಣವೂ ಕೆಲಸವೂ, ಬೇರೆಯಾಗುವುದಿಲ್ಲ.

ಹೇಗೆಂದರೆ, ರತ್ನಗಳನ್ನು ಕೆತ್ತಿ ಭಂಗಾರದಲ್ಲಿ ಮಾಡಿದರೂ ಪಾದುಕೆ ಕಾಲಿಗೆ ಉಪಯೋಗವೇ ಹೊರತು ಮತ್ತೆ ಯಾವುದಕ್ಕೂ ಆಗುವುದಿಲ್ಲ.

41. ಸತ್ಪುರುಷರು ತಮ್ಮನ್ನು ಅನ್ಯರು ಹೊಗಳಬೇಕೆಂಬ ಆಶೆಯಿಂದ ಉಪಕಾರ ಮಾಡುವುದಿಲ್ಲ ; ಮಾಡತಕ್ಕುದೆಂದು ತಿಳಿದು ಮಾಡುತ್ತಾರೆ.

ಹೇಗೆಂದರೆ, ಕೈ ತನ್ನನ್ನು ಸ್ತೋತ್ರಮಾಡಲಿ ಎಂದು ಮಧುರವಾದ ಪದಾರ್ಥಗಳನ್ನು ಬಾಯಿಗೆ ಕೊಡುವುದಿಲ್ಲ.

42. ಒಂದು ವಂಶದಲ್ಲಿ ಸತ್ಪುತ್ರನು ಒಬ್ಬನು ಹುಟ್ಟಿದರೂ ಸಾಕು ; ಕೆಟ್ಟ ಮಕ್ಕಳು ನೂರು ಮಂದಿ ಹುಟ್ಟಿದರೂ ಪ್ರಯೋಜನವಿಲ್ಲ.

ಹೇಗೆಂದರೆ, ಆಕಾಶದಲ್ಲಿ ಚಂದ್ರನು ಒಬ್ಬನಿದ್ದರೆ ಸಾಕು ; ಅವನಿಲ್ಲದೆ ನಕ್ಷತ್ರಗಳೆಷ್ಟಿದ್ದು ಏನು ಫಲ ?

43. ಉತ್ತಮ ಪುರುಷರ ಸ್ನೇಹವು ದಿನ ದಿನವೂ ವೃದ್ಧಿಯಾಗುವುದು ; ಅಧಮರ ಸ್ನೇಹವು ಪ್ರತಿದಿವಸವೂ ಕಡಮೆಯಾಗುತ್ತ ಬರುತ್ತದೆ.

ಹೇಗೆಂದರೆ, ಶುಕ್ಲಪಕ್ಷದ ಚಂದ್ರನು ದಿನ ದಿನವೂ ವೃದ್ಧಿಯನ್ನು ಹೊಂದುವನು ; ಕೃಷ್ಣಪಕ್ಷದ ಚಂದ್ರನು ಕೃಶನಾಗುವನು.

44. ಸಜ್ಜನರು ಕೆಟ್ಟವರ ನಡುವೆ ವಾಸಮಾಡಿದರೂ ಅವರ ಗುಣಗಳು ಯಾವಾಗಲೂ ವ್ಯತ್ಯಾಸವನ್ನು ಹೊಂದುವುದಿಲ್ಲ.

ಹೇಗೆಂದರೆ, ಬಾಳೆಯಮರವು ಬೇವಿನ ಕಾಡಿನಲ್ಲಿ ಬೆಳೆದರೂ ಇನಿದಾದ ಹಣ್ಣನ್ನೇ ಕೊಡುವುದು.

45. ವಿದ್ವಾಂಸರನ್ನೂ ಮೂಢರನ್ನೂ ಅವರವರ ಮಾತಿನಿಂದಲೇ ಹೊರತು ರೂಪದಿಂದ ಅರಿಯುವುದಕ್ಕೆ ಆಗುವುದಿಲ್ಲ.

ಹೇಗೆಂದರೆ, ಕೋಗಿಲೆಯನ್ನೂ ಕಾಗೆಯನ್ನೂ ಅವುಗಳ ಧ್ವನಿಯಿಂದಲೇ ಹೊರತು ರೂಪದಿಂದ ಬೇರ್ಪಡಿಸಲಾಗುವುದಿಲ್ಲ.

46. ಹಿರಿಯರು ತಮ್ಮ ಆಶ್ರಿತರಿಗೆ ಕಷ್ಟವು ಬಂದಾಗ ತಮ್ಮ ಪ್ರಾಣವನ್ನಾದರೂ ಕೊಟ್ಟು ಅವರನ್ನು ಕಾಪಾಡುವರು.

ಹೇಗೆಂದರೆ, ಹಾಲು ತನ್ನನ್ನು ಸೇರಿದ ನೀರು ಬೆಂಕಿಯಿಂದ ಸುಂಡಿ ಹೋದುದನ್ನು ನೋಡಿ ಸಹಿಸದೆ ಉಕ್ಕಿ ಬೆಂಕಿಯಲ್ಲಿ ಬಿದ್ದು ಅದನ್ನು ಆರಿಸಿ ಪುನಃ ನೀರೊಂದಿಗೆ ಸೇರಿ ಅಡಗುವುದು.

47. ಸಜ್ಜನರು ಬಡತನ ಮೊದಲಾದ ಸಂಕಟಗಳು ಬಂದರೂ ತಮ್ಮ ಸ್ವಭಾವವಾದ ಗುಣಗಳನ್ನು ಬಿಡುವುದಿಲ್ಲ.

ಹೇಗೆಂದರೆ, ಭಂಗಾರವನ್ನು ಸುಟ್ಟರೂ, ಕಬ್ಬನ್ನು ಹಿಂಡಿದರೂ, ಹಾಲನ್ನು ಕಾಯಿಸಿದರೂ, ಚಂದನವನ್ನು ತೇದರೂ ಅವುಗಳ ಗುಣಗಳು ಕೆಡುವುದಿಲ್ಲ.

48. ಲೋಭಿಗಳು ತಾವೂ ದಾನಮಾಡುವುದಿಲ್ಲ; ಮಾಡುವವರನ್ನೂ ಕೂಡ ಮಾಡಗೊಡಿಸುವುದಿಲ್ಲ.

ಹೇಗೆಂದರೆ, ಗೊಬ್ಬಳಿಯ ಮರವು ತಾನೂ ಫಲವನ್ನು ಕೊಡುವುದಿಲ್ಲ; ಮಧುರವಾದ ಫಲವನ್ನು ಕೊಡುವ ಮರಗಳ ಬಳಿಗೆ ಹೋಗುವುದಕ್ಕೆ ಅಡ್ಡಿಯಾಗಿಯೂ ಇದೆ.

49. ಸತ್ಪುರುಷರು ಅನೇಕ ಶತ್ರುಗಳ ಮಧ್ಯದಲ್ಲಿದ್ದರೂ ಅವರಿಂದ ಸುಖವನ್ನೇ ಹೊಂದುವರು.

ಹೇಗೆಂದರೆ, ಮೂವತ್ತೆರಡು ಹಲ್ಲುಗಳ ನಡುವೆ ಸಿಕ್ಕಿಕೊಂಡಿರುವ ನಾಲಗೆ ಅವುಗಳ ಸಹಾಯದಿಂದಲೇ ಇನಿದಾದ ಪದಾರ್ಥಗಳನ್ನು ಸವಿ ನೋಡುತ್ತದೆ.

50. ಮೂಢರು ವಿದ್ವಾಂಸರನ್ನು ಅನಾದರಣೆಮಾಡಿದರೂ ಅವರ ಯೋಗ್ಯತೆಯನ್ನು ತಿಳಿಯಬಲ್ಲವರಿಂದ ಅವರು ಗೌರವಿಸಲ್ಪಡುವುದಕ್ಕೆ ಏನೇನೂ ಸಂದೇಹವಿಲ್ಲ.

ಹೇಗೆಂದರೆ, ಹಳ್ಳಿಯವರು ಕಸ್ತೂರಿಯನ್ನು ಕೆಸರೆಂದು ಭಾವಿಸಿ ಬಿಸುಟರೂ ಅದು ದೊರೆಗಳಿಂದ ಹಣೆಯಲ್ಲಿ ಧರಿಸಲ್ಪಡುವುದು.

51. ಚೆಲುವಾದ ರೂಪದಿಂದ ಒಬ್ಬನು ಒಳ್ಳೆಯವನೆಂದೂ ವಿಕಾರವಾದ ರೂಪದಿಂದ ಮತ್ತೊಬ್ಬನು ಕೆಟ್ಟವನೆಂದೂ ಹೇಳಕೂಡದು.

ಹೇಗೆಂದರೆ, ಸೊಟ್ಟಾಗಿರುವ ವೀಣೆ ಕಿವಿಗೆ ಇಂಪಾದ ನಾದವನ್ನು ಉಂಟುಮಾಡುತ್ತದೆ; ನೆಟ್ಟನೆ ಇರುವ ಬಾಣವು ಪ್ರಾಣಸಂಕಟವನ್ನು ಉಂಟುಮಾಡುತ್ತದೆ.

52. ಮನುಷ್ಯರು ತಾವು ಒಳ್ಳೆಯವರಾದರೂ ನೀಚರ ಸಹವಾಸದಿಂದ ಕೇಡನ್ನು ಅನುಭವಿಸುವರು.

ಹೇಗೆಂದರೆ, ಕಾಡಿನಲ್ಲಿರುವ ಚೆಲುವಾದ ಚಂದನವೃಕ್ಷವು ಬಿದಿರಿನ ಸಹವಾಸದಿಂದ ಕಿಚ್ಚಿನಲ್ಲಿ ಭಸ್ಮವಾಗುವುದು.

53. ವಿವೇಕಿಯಾದ ಮಗನು ಒಬ್ಬನು ಹುಟ್ಟಿದರೂ ವಂಶಕ್ಕೆ ಗೌರವವುಂಟು; ಅವಿವೇಕಿಗಳು ಅನೇಕರು ಹುಟ್ಟಿದರೂ ಪ್ರಯೋಜನವಿಲ್ಲ.

ಹೇಗೆಂದರೆ, ಆನೆ ಬಹಳ ದಿವಸಕ್ಕೆ ಒಂದು ಮರಿಯನ್ನು ಹಾಕಿದರೂ ಅದು ರಾಜರಿಂದ ಲಾಲಿಸಲ್ಪಡುತ್ತದೆ; ಹಂದಿ ಸ್ವಲ್ಪ ಕಾಲದಲ್ಲಿಯೇ ಹಲವು ಮರಿಗಳನ್ನು ಹಾಕಿದರೂ ಅವುಗಳನ್ನು ಲಾಲಿಸುವರಿಲ್ಲ.

54. ವಿಶೇಷವಾಗಿ ವಿದ್ಯೆಯನ್ನು ಕಲಿತವರು ಸಮಯವರಿತು ಮಾತನಾಡುತ್ತಾರೆ; ತಿಳಿಯದವರು ಯಾವಾಗಲೂ ಹರಟೆ ಹೊಡೆಯುತ್ತಲೇ ಇರುವರು.

ಹೇಗೆಂದರೆ, ದಿವ್ಯವಾದ ಮಾವಿನ ರಸವನ್ನು ಕುಡಿದ ಕೋಗಿಲೆ ಸುಮ್ಮನೆ ಇದ್ದರೂ ಕೆಸರಿನ ನೀರನ್ನು ಕುಡಿದ ಕಪ್ಪೆ ವಟವಟ ಎನ್ನುತ್ತಲೇ ಇರುವುದು.

55. ಆಕಾರದಲ್ಲಿ ಚಿಕ್ಕವರಾದರೂ ಕೆಲವರು ದೊಡ್ಡ ಕೆಲಸಗಳನ್ನು ಮಾಡಬಲ್ಲರು; ಇತರರು ಆಕಾರದಲ್ಲಿ ದೊಡ್ಡವರಾದರೂ ಚಿಕ್ಕ ಕೆಲಸಗಳನ್ನೂ ಕೂಡ ಮಾಡಲಾರರು.

ಹೇಗೆಂದರೆ, ಆಲದ ಬೀಜವು ಬಹಳ ಚಿಕ್ಕದಾದರೂ ದೊಡ್ಡ ಮರವಾಗಿ ಅನೇಕರಿಗೆ ನೆಳಲನ್ನು ಕೊಡುತ್ತದೆ; ತೆಂಗಿನ ಬೀಜವು ದೊಡ್ಡದಾಗಿದ್ದರೂ ಮರವಾದರೆ ಒಬ್ಬರಿಗೂ ಕೂಡ ನೆಳಲಾಗುವುದಿಲ್ಲ.

56. ಜನರು ಹಿತವಾಗಿಯೂ ಮೃದುವಾಗಿಯೂ ಮಾತನಾಡಿದರೆ ಮರ್ಯಾದೆಯನ್ನು ಹೊಂದುತ್ತಾರೆ; ಇಲ್ಲದೆ ನಿಷ್ಠುರವಾದ ಮಾತನ್ನಾಡಿದರೆ ಅಪಮಾನಪಡುತ್ತಾರೆ.

ಹೇಗೆಂದರೆ, ಗಿಳಿ ಎಲ್ಲರಿಗೂ ಸಂತೋಷವುಂಟಾಗುವಂತೆ ಮಾತನಾಡುವುದರಿಂದ ಹಾಲನ್ನೂ ಹಣ್ಣನ್ನೂ ಕೊಟ್ಟು ಅದನ್ನು ಲಾಲಿಸುತ್ತಾರೆ; ಕತ್ತೆ ಕಠೋರವಾಗಿ ಕೂಗುವುದರಿಂದ ಅದನ್ನು ಕೋಲಿನಿಂದ ಹೊಡೆದು ಓಡಿಸುತ್ತಾರೆ.

57. ಸತ್ಪುರುಷರ ಸ್ನೇಹವು ಬರುತ್ತ ಬರುತ್ತ ಆನಂದವನ್ನು ಹೆಚ್ಚಿಸುತ್ತದೆ; ದುರ್ಜನರದು ದಿನದಿನವೂ ಸಂತೋಷವನ್ನು ಕಡಮೆ ಮಾಡುತ್ತದೆ.

ಹೇಗೆಂದರೆ, ಕಬ್ಬನ್ನು ತುದಿಯಿಂದ ತಿಂದರೆ ಬರುತ್ತ ಬರುತ್ತ ರುಚಿ ಹೆಚ್ಚುತ್ತದೆ; ತಾಳಿಂದ ತಿಂದರೆ ರುಚಿ ಕಡಮೆಯಾಗುತ್ತ ಬರುತ್ತದೆ.

58. ಸಜ್ಜನರು ಯಾವ ಕುಲದಲ್ಲಿ ಹುಟ್ಟಿದರೂ ಎಲ್ಲರಿಂದಲೂ ಸನ್ಮಾನಿಸಲ್ಪಡುವರು.

ಹೇಗೆಂದರೆ, ಗೋರೋಚನ, ಪುನುಗು, ಜವ್ವಾದಿ, ಜೇನು —ಇವುಗಳು ಹೀನ ಸ್ಥಳಗಳಲ್ಲಿ ಹುಟ್ಟಿದರೂ ಎಲ್ಲರಿಂದಲೂ ಅಪೇಕ್ಷಿಸಲ್ಪಡುತ್ತವೆ.

59. ಜನರಿಗೆ ಎಷ್ಟು ದುಃಖವಿದ್ದರೂ ಆಪ್ತ ಬಂಧುಗಳನ್ನು ಕಂಡರೆ ಆ ದುಃಖವನ್ನು ಮರೆತು ಸಂತೋಷಿಸುವರು.

ಹೇಗೆಂದರೆ, ತಾಯಿ ಪ್ರಸವಕಾಲದಲ್ಲಿ ಎಷ್ಟು ವೇದನೆಯನ್ನು ಹೊಂದಿದರೂ ತನ್ನ ತೊಡೆಯ ಮೇಲೆ ಗಂಡುಮಗುವನ್ನು ನೋಡಿ ಆ ನೋವನ್ನೆಲ್ಲಾ ಮರೆತು ಆನಂದಿಸುತ್ತಾಳೆ.

60. ನೀಚರು ಹಣಗಾರರಾಗಿ ಸಮೀಪದಲ್ಲಿ ಇದ್ದರೂ ಮಾನಿಗಳು ಅವರನ್ನು ಬಿಟ್ಟು ದರಿದ್ರರಾಗಿರುವ ಸಜ್ಜನರು ದೂರದಲ್ಲಿದ್ದರೂ ಅವರಲ್ಲಿ ಹೋಗಿ ತಮ್ಮ ತೊಂದರೆಗಳನ್ನು ಹೇಳಿಕೊಳ್ಳುವರು.

ಹೇಗೆಂದರೆ, ಸಮುದ್ರದಲ್ಲಿ ಬೇಕಾದಷ್ಟು ನೀರಿದ್ದರೂ ಅದನ್ನು ಬಿಟ್ಟು ಜನರು ದೂರದಲ್ಲಿರುವ ಬಾವಿಯಲ್ಲಿ ನೀರನ್ನು ತೆಗೆದು ಕೊಳ್ಳುತ್ತಾರೆ.

61. ಲೋಕದಲ್ಲಿ ಜನರಿಗೆ ಸತ್ಯವು ಅನಭಿಮತವಾಗಿಯೂ ಅಸತ್ಯವು ಬಹಳ ಹಿತವಾಗಿಯೂ ಇರುತ್ತದೆ.

ಹೇಗೆಂದರೆ, ಹಾಲು ಮನೆ ಮನೆಗೆ ತೆಗೆದುಕೊಂಡು ಹೋಗಿ ಮಾರಿದರೆ ಬೆಲೆಯಾಗುತ್ತದೆ; ಹೆಂಡವನ್ನು ಇದ್ದ ಸ್ಥಳಕ್ಕೇ ಹೋಗಿ ಕೊಂಡುಕೊಳ್ಳುತ್ತಾರೆ.

62. ದೊಡ್ಡವರ ಸಮೀಪಕ್ಕೆ ಹೋದರೆ ಉತ್ತಮವಾದ ವಸ್ತುಗಳು ಸಿಕ್ಕುತ್ತವೆ; ಅಲ್ಪರ ಹತ್ತಿರ ಹೋದರೆ ತುಚ್ಛವಾದ ಪದಾರ್ಥಗಳು ದೊರೆಯುತ್ತವೆ.

ಹೇಗೆಂದರೆ, ಸಿಂಹವಿರುವ ಗವಿಗೆ ಹೋದರೆ ಆನೆಯ ದಂತಗಳೂ ಮುತ್ತುಗಳೂ ಸಿಕ್ಕುತ್ತವೆ; ನರಿಯಿರುವ ಸ್ಥಳಕ್ಕೆ ಹೋದರೆ ಕತ್ತೆಯ ತೊಗಲೂ ಕೂದಲೂ ಎಲುವೂ ಸಿಕ್ಕುತ್ತವೆ.

63. ಜನರಿಗೆ ಸ್ವಸ್ಥಾನದಲ್ಲಿರುವ ಬಲವು ಆ ಸ್ಥಾನವನ್ನು ಬಿಟ್ಟರೆ ಇರುವುದಿಲ್ಲ.
ಹೇಗೆಂದರೆ, ಮೊಸಳೆ ನೀರಿನಲ್ಲಿದ್ದುಕೊಂಡು ಆನೆಯನ್ನಾದರೂ ಎಳೆಯುತ್ತದೆ; ನೆಲದ ಮೇಲೆ ಬಂದಾಗ ನಾಯಿಂದಲೂ ಅಪಮಾನಪಡುತ್ತದೆ.

64. ನೀಚರು ತಮ್ಮಂಥವರೊಂದಿಗೆ ಜಗಳವಾಡಿದರೆ ಏನಾದರೂ ಲಾಭವುಂಟು; ಸಜ್ಜನರೊಂದಿಗೆ ಆಡಿದರೆ ಏನೂ ಪ್ರಯೋಜನವಿಲ್ಲ.
ಹೇಗೆಂದರೆ, ನಾಯಿ ನಾಯಿಗಳೊಂದಿಗೆ ಕಾದಿದರೆ ಒಂದು ಎಂಜಲೆಲೆಯಾದರೂ ಸಿಕ್ಕುತ್ತದೆ; ಆನೆಯನ್ನು ನೋಡಿ ಬಗುಳಿದರೆ ಏನು ಫಲ?

65. ಮಾನಿಗಳು ತಮ್ಮ ಮನಸ್ಸಿಗೆ ಸರಿಯಾದವರಲ್ಲಿ ತಮ್ಮ ಕೊರತೆಗಳನ್ನು ಹೇಳಿಕೊಳ್ಳುವರಲ್ಲದೆ, ಇತರರು ಎಷ್ಟು ಧನಿಕರಾದರೂ ಅವರಲ್ಲಿ ಹೇಳಿಕೊಳ್ಳುವುದಿಲ್ಲ.
ಹೇಗೆಂದರೆ, ಚಾತಕಪಕ್ಷಿ ಕೊಳಗಳಲ್ಲಿಯೂ ನದಿಗಳಲ್ಲಿಯೂ ನಿರ್ಮಲವಾದ ನೀರು ಬೇಕಾದಷ್ಟು ಇದ್ದರೂ ಅದನ್ನು ಕುಡಿಯದೆ ಮೇಘದಿಂದ ಬೀಳುವ ಹನಿಗಳನ್ನೇ ಕುಡಿಯುತ್ತದೆ.

66. ಶತ್ರು ಚಿಕ್ಕವನೆಂದು ಅಲಕ್ಷ್ಯ ಮಾಡಕೂಡದು.
ಹೇಗೆಂದರೆ, ಚೇಳು ಚಿಕ್ಕದೆಂದು ಅದನ್ನು ಮುಟ್ಟಿದರೆ ಕಚ್ಚದೆ ಇರುವುದೇ? ಚಿಗುರೆಂದು ಬೇವಿನ ಸೊಪ್ಪನ್ನು ತಿಂದರೆ ರುಚಿಯಾಗಿರುವುದೇ?

67. ಬಡವನು ಬಲ್ಲಿದನಾಗುವುದು ಒಂದತಿಶಯವಲ್ಲ.
ಹೇಗೆಂದರೆ, ಕೃಶನಾದ ಚಂದ್ರನು ವೃದ್ಧಿಯನ್ನು ಹೊಂದುವುದಿಲ್ಲವೇ? ಸಣ್ಣ ಬೀಜವು ದೊಡ್ಡ ಮರವಾಗುವುದಿಲ್ಲವೇ?

68. ಸಜ್ಜನರು ಪರರ ಸಂಕಟಗಳನ್ನು ತಮ್ಮ ಸಂಕಟಗಳ ಹಾಗೆ ತಿಳಿಯುತ್ತಾರೆ.

ಹೇಗೆಂದರೆ, ಇತರವಾದ ಅವಯುವಗಳಿಗೆ ಏನಾದರೂ ನೋವು ಬಂದರೆ ಕಣ್ಣು ನೀರನ್ನು ಸುರಿಸುತ್ತದೆ.

69. ನಿಷ್ಠುರವಾದ ಮಾತು ಮೃದುವಾದ ಮಾತನ್ನು ಜಯಿಸಲಾರದು.

ಹೇಗೆಂದರೆ, ಆನೆಯ ಕಪೋಲವನ್ನು ಭೇದಿಸುವ ಮೊನೆಯಾದ ಬಾಣವು ಹತ್ತಿಯಲ್ಲಿ ಹಾಯಲಾರದು; ಕಬ್ಬಿಣದ ಹಾರೆಗೆ ಸಡಿಲದ ಬಂಡೆ ಮೃದುವಾದ ಗಿಡದ ಬೇರಿಗೆ ಸ್ಥಳಕೊಡುತ್ತದೆ.

70. ವಿದ್ಯಾವಂತರ ಸಮೀಪದಲ್ಲಿದ್ದರೆ ಮೂಢರಿಗೂ ಜ್ಞಾನವುಂಟಾಗುತ್ತದೆ.

ಹೇಗೆಂದರೆ, ಕಸ್ತೂರಿಯು ಸಂಪರ್ಕದಿಂದ ಅದನ್ನು ಇಟ್ಟಿರುವ ಮರದ ಭರಣಿ ವಾಸನೆಯುಳ್ಳದಾಗುತ್ತದೆ; ಹೂವಿನೊಂದಿಗೆ ಸೇರಿದ ನಾರೂ ವಾಸನೆಯನ್ನು ಹೊಂದುತ್ತದೆ.

71. ಹಣಗಾರರು ತಮಗೆ ಒಂದು ಕಾಸನ್ನು ಕೊಡದೆ ಇದ್ದರೂ, ಜನರು ಅವರನ್ನು ಬಿಡುವುದಿಲ್ಲ.

ಹೇಗೆಂದರೆ, ಗಡಿಗೆಯಲ್ಲಿರುವ ತುಪ್ಪವು ತಮಗೆ ಸಿಕ್ಕುವಹಾಗೆ ಇಲ್ಲದೆ ಇದ್ದರೂ, ಇರುವೆಗಳು ಅದರ ಸುತ್ತಲೂ ಹರಿಯುವುದನ್ನು ಬಿಡುವುದಿಲ್ಲ.

72. ಹಣಗಾರರು ತಮ್ಮಲ್ಲಿ ಕೆಲಸಕ್ಕೋಸ್ಕರ ಬರುವವರನ್ನು ಹುಡುಕುವ ಆವಶ್ಯಕವಿಲ್ಲ.

ಹೇಗೆಂದರೆ, ಕೊಳವನ್ನು ಕಟ್ಟಿಸಿ ಕಪ್ಪೆಗಳನ್ನು ಹುಡುಕುವುದಕ್ಕೆ ಹೋಗುವವರಿಲ್ಲ.

73. ಸುಜನರು ತಾವು ಕಷ್ಟಕ್ಕೆ ಗುರಿಯಾದರೂ ಪರರ ಕಷ್ಟವನ್ನು ತಪ್ಪಿಸುವುದಕ್ಕೆ ಸಿದ್ಧರಾಗುತ್ತಾರೆ.

ಹೇಗೆಂದರೆ, ಕೈ ಮೈಯಮೇಲೆ ಬೀಳುವ ಏಟುಗಳನ್ನು ತಾನು ಆತುಕೊಳ್ಳುವುದಕ್ಕೆ ಹೋಗುತ್ತದೆ.

74. ಒಳ್ಳೆಯ ಶಿಷ್ಯನಿಗೆ ವಿದ್ಯೆಯನ್ನು ಹೇಳಿದರೆ ಪ್ರಯೋಜನವುಂಟು; ಮೂರ್ಖನಿಗೆ ಹೇಳುವುದು ನಿಷ್ಫಲವು.

ಹೇಗೆಂದರೆ, ಎತ್ತಿಗೆ ಮುದ್ರೆಯನ್ನು ಹಾಕಿದರೆ ಬಸವನೆನ್ನಿಸಿ ಕೊಳ್ಳುತ್ತದೆ; ಕತ್ತೆಗೆ ಹಾಕಿದರೆ ಬಸವನಾಗುವುದೇ?

75. ದರಿದ್ರರಾಗಿರುವಾಗ ಮಕ್ಕಳೂ ಕೂಡ ವಿಚಾರಿಸುವುದಿಲ್ಲ.
ಹೇಗೆಂದರೆ, ಹಾಲಿಲ್ಲದೆ ಇದ್ದಾಗ ಕರು ತಾಯ ಸಮೀಪಕ್ಕೆ ಹೋಗುವುದಿಲ್ಲ.

76. ಜಿಪುಣನು ಬೇಕಾದಷ್ಟು ಐಶ್ವರ್ಯವಿದ್ದರೂ ಸುಖವನ್ನು ಅರಿಯನು.
ಹೇಗೆಂದರೆ, ಕೆಚ್ಚಲಲ್ಲಿ ವಾಸಮಾಡುತ್ತಿದ್ದರೂ ಉಣ್ಣೆ ನೊರೆಹಾಲ ಸವಿಯನ್ನು ಬಲ್ಲುದೇ?

77. ನೀಚರಿಗೆ ಉಪಕಾರಮಾಡಿದರೆ ಕೇಡುಂಟಾಗುತ್ತದೆ.
ಹೇಗೆಂದರೆ, ಬೆಂಕಿಯಲ್ಲಿ ಬಿದ್ದ ಚೇಳನ್ನು ಎತ್ತಿಹಾಕಿದರೆ ಕಚ್ಚದೆ ಬಿಡುವುದೇ?

78. ದೊಡ್ಡವರು ತಮ್ಮ ವಿಷಯದಲ್ಲಿ ಅಲ್ಪರು ಎಷ್ಟು ಮೀರಿ ನಡೆಯು ತ್ತಾರೋ ಅಷ್ಟು ತಾಳ್ಮೆಯನ್ನು ಹೊಂದುತ್ತಾರೆ.
ಹೇಗೆಂದರೆ, ತೂಕಮಾಡುವಾಗ ತಕ್ಕಡಿಯಲ್ಲಿ ಹಗುರವಾದುದು ಮೇಲಕ್ಕೆ ಹೋದಷ್ಟೂ ಭಾರವಾದುದು ಕೆಳಕ್ಕೆ ಬರುತ್ತದೆ.

79. ಸಣ್ಣ ಪದಾರ್ಥಗಳಿಂದ ಆಗುವ ಕೆಲಸವು ದೊಡ್ಡವುಗಳಿಂದ ಆಗು ವುದಿಲ್ಲ.
ಹೇಗೆಂದರೆ, ಕಲ್ಲುಬಂಡೆಯನ್ನು ಸೀಳಬೇಕಾದರೆ, ಚಿಕ್ಕ ಉಳಿ ಯಿಂದ ಆಗುವುದೇ ಹೊರತು ಆನೆ ಮೆಟ್ಟುವುದರಿಂದ ಆಗುವು ದಿಲ್ಲ; ಹೆಚ್ಚಾದ ಭಾರವನ್ನು ಎತ್ತಬೇಕಾದರೆ ಸನ್ನೆಯಿಂದ ಆಗುವ ಹಾಗೆ ದೊಡ್ಡ ಮರದಿಂದ ಆಗುವುದಿಲ್ಲ.

80. ಸತ್ಕವಿಯನ್ನು ಒಬ್ಬ ಲೋಭಿ ಗೌರವಿಸದೆ ಹೋದರೆ ಆ ಕವಿಯ ಯೋಗ್ಯತೆಯನ್ನು ಅರಿತು ಸನ್ಮಾನಿಸುವವರಿಲ್ಲವೇ?
ಹೇಗೆಂದರೆ, ಅರಣ್ಯದಲ್ಲಿ ಸಂಚರಿಸುವ ಗಿಳಿಗೆ ಒಂದು ಮರವು ಗೊಡ್ಡಾದರೆ ಫಲವತ್ತಾದ ಮರಗಳೇ ಇಲ್ಲವೆ? ಒಂದು ಹೂ ಬಾಡಿ ಹೋದರೆ ತುಂಬಿಗೆ ಬೇರೆ ಹೂಗಳಿಲ್ಲವೆ?

## ೪ನೆಯ ಭಾಗ

1. ಆಪ್ತ ಬಂಧುಗಳಲ್ಲಿ ದ್ವೇಷವನ್ನು ಬೆಳಸಬಾರದು.

ಉದಾಹರಣೆ.—ಹಿತಚಿಂತಕನಾದ ವಿಭೀಷಣನನ್ನು ರಾವಣನು ಲಂಕೆಯಿಂದ ಓಡಿಸಿಬಿಟ್ಟನು. ಅವನೇ ರಾವಣನ ನಾಶಕ್ಕೆ ಕಾರಣವಾದನು. ವಾಲಿ ಸುಗ್ರೀವನಲ್ಲಿ ಮಾಡಿದ ವೈರದಿಂದ ನಾಶವನ್ನು ಹೊಂದಿದನು. ಕೌರವರು ಪಾಂಡವರಲ್ಲಿ ದ್ವೇಷವನ್ನು ಮಾಡಿದುದರಿಂದ ಕ್ಷಯವನ್ನೈದಿದರು.

2. ಐಶ್ವರ್ಯವು ಬಂದ ಕಾಲದಲ್ಲಿ ಅಹಂಕಾರಪಡಕೂಡದು.

ಉದಾ.—ಸ್ವರ್ಗದ ಆಧಿಪತ್ಯವನ್ನು ಹೊಂದಿದ ನಹುಷನು ಅಹಂಕಾರದಿಂದ ಋಷಿಗಳಿಗೆ ಕೋಪವನ್ನು ಉಂಟುಮಾಡಿ ಕೆಳಕ್ಕೆ ಬಿದ್ದನು.

3. ಒಳ್ಳೆಯ ಮಾತುಗಳಿಂದ ಮೂರ್ಖನನ್ನು ಸ್ವಾಧೀನಪಡಿಸಿಕೊಳ್ಳಬೇಕು.

ಉದಾ.—ದೇವಕಿಯನ್ನು ಕೊಲ್ಲಬೇಕೆಂದು ಕತ್ತಿಯನ್ನು ಎತ್ತಿದ ಕಂಸನನ್ನು ವಸುದೇವನು ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸಿದನು.

4. ಮೂರ್ಖರಿಗೆ ಉಪದೇಶಮಾಡುವುದು ಅಪಾಯಕರವು.

ಉದಾ.—"ತಮ್ಮಾ! ನಿನ್ನ ನಡತೆ ಸರಿಯಾಗಿಲ್ಲ" ಎಂದು ಹೇಳಿದ ಕುಬೇರನನ್ನು ರಾವಣನು ಯುದ್ಧದಲ್ಲಿ ಸೋಲಿಸಿ ಸೆರೆಹಿಡಿದುಕೊಂಡನು.

5. ಜೂಜಾಟದಲ್ಲಿ ಆಶೆಯಿಟ್ಟರೆ ಕೇಡುಂಟಾಗುವುದು.

ಉದಾ.—ಶಕುನಿಯೊಡನೆ ಜೂಜಾಡಿದ ಧರ್ಮರಾಯನು ರಾಜ್ಯವನ್ನು ಕಳೆದುಕೊಂಡು ಕಾಡಿಗೆ ಹೋದನು. ನಳರಾಯನು ಪುಷ್ಕರನೊಂದಿಗೆ ಜೂಜಾಡಿ ರಾಜ್ಯಭ್ರಷ್ಟನಾದನು.

6. ಸ್ನೇಹಿತರು ಹೇಳುವ ಮಾತನ್ನು ಕೇಳಬೇಕು.

ಉದಾ.—ವಿದುರನು ಪಾಂಡವರೊಡನೆ ಯುದ್ಧಮಾಡಬೇಡ ಎಂದು ಎಷ್ಟು ಬೋಧಿಸಿದರೂ ಕೇಳದೆ ಧೃತರಾಷ್ಟ್ರನು ನಾಶವನ್ನು ಹೊಂದಿದನು.

7. ತನಗಿಂತ ಹೆಚ್ಚಾದ ಬಲವುಳ್ಳವನೊಡನೆ ಯುದ್ಧಕ್ಕೆ ಹೋಗಬಾರದು.

ಉದಾ.—ಗರ್ವದಿಂದ ಕಾರ್ತವೀರ್ಯನೊಂದಿಗೆ ಯುದ್ಧಕ್ಕೆ ಹೋದ ರಾವಣನು ಭಂಗಪಟ್ಟನು.

8. ಕೈಯಲ್ಲಾಗದ ಕೆಲಸವನ್ನು ಮಾಡುವುದಕ್ಕೆ ಹೋಗಬಾರದು.

ಉದಾ.—ಮನ್ಮಥನು ಈಶ್ವರನನ್ನು ಜಯಿಸುವುದಕ್ಕೆ ಹೋಗಿ ತಾನೇ ಭಸ್ಮವಾದನು.

9. ಘಟಿಕನಾದವನನ್ನು ಕೆಲಸಮಾಡುವುದಕ್ಕೆ ಬಿಡಬೇಕು.

ಉದಾ.—ರಾಮನು ಲಕ್ಷ್ಮಣನು ಮೂರ್ಛಿತನಾದಾಗ ಮೂಲಿಕೆಯನ್ನು ತರುವುದಕ್ಕೆ ಆಂಜನೇಯನನ್ನೇ ಕಳುಹಿಸಿದನು.

10. ಕಾರಣವಿಲ್ಲದೆ ಕೋಪಮಾಡುವವನು ಕೇಡನ್ನು ಹೊಂದುತ್ತಾನೆ.

ಉದಾ.—ನಿರಪರಾಧಿಯಾದ ಅಂಬರೀಷನನ್ನು ಶಪಿಸಿದ ದುರ್ವಾಸಋಷಿ ವಿಷ್ಣುವಿನ ಚಕ್ರದಿಂದ ತಪಿಸಲ್ಪಟ್ಟನು.

11. ಶಿಕ್ಷೆಗೆ ಅರ್ಹನಲ್ಲದವನನ್ನು ಶಿಕ್ಷಿಸಬಾರದು.

ಉದಾ.—ಯಮನು ನಿರಪರಾಧಿಯಾದ ಮಾಂಡವ್ಯನನ್ನು ದಂಡಿಸಿ ಶಾಪದಿಂದ ಶೂದ್ರನಾದನು.

12. ಚಿಕ್ಕ ಪದಾರ್ಥವನ್ನು ಕೊಟ್ಟಾದರೂ ದೊಡ್ಡ ಪದಾರ್ಥವನ್ನು ಉಳಿಸಿಕೊಳ್ಳಬೇಕು.

ಉದಾ.—ಕುಬೇರನು ಯುದ್ಧಕ್ಕೆ ಬಂದ ರಾವಣನಿಗೆ ಒಂದು ಪುಷ್ಪಕವನ್ನು ಕೊಟ್ಟು ಅಳಕಾಪಟ್ಟಣವನ್ನು ಉಳಿಸಿಕೊಂಡನು.

13. ಎಲ್ಲರಿಗೂ ಹಿತಕರವಾದ ಕೆಲಸವನ್ನು ಮಾಡಬೇಕು.

ಉದಾ.—ಭಗೀರಥನು ತನ್ನ ಪಿತೃಗಳನ್ನು ಉದ್ಧಾರಮಾಡುವುದಕ್ಕೋಸ್ಕರ ಗಂಗೆಯನ್ನು ಭೂಮಿಗೆ ತಂದು ಎಲ್ಲರೂ ಪರಿಶುದ್ಧರಾಗುವಂತೆ ಮಾಡಿದನು.

14. ತಾನು ಹೊಂದುವುದಕ್ಕೆ ಅಶಕ್ಯವಾದ ಪದಾರ್ಥವನ್ನು ಹೊಂದ ಬೇಕೆಂದು ಹಠವನ್ನು ಹಿಡಿಯಬಾರದು.

ಉದಾ.—ವಿಶ್ವಾಮಿತ್ರನು ವಸಿಷ್ಠನಲ್ಲಿದ್ದ ಕಾಮಧೇನುವನ್ನು ಹೊಂದಬೇಕೆಂದು ಎಷ್ಟು ಸಾಹಸಮಾಡಿದರೂ ಆಗಲಿಲ್ಲ.

15. ತನ್ನ ಸ್ನೇಹಿತನ ಶತ್ರುವನ್ನು ತನ್ನ ಶತ್ರುವಿನ ಹಾಗೆಯೇ ಭಾವಿಸ ಬೇಕು.

ಉದಾ.—ಸ್ನೇಹಿತನಾದ ಸುಗ್ರೀವನಿಗೋಸ್ಕರ ಶ್ರೀರಾಮನು ನಿರಪರಾಧಿಯಾದ ವಾಲಿಯನ್ನು ಕೊಂದನು.

16. ಕರೆಯಿಸಿಕೊಳ್ಳದೆ ಎಲ್ಲಿಯೂ ಹೋಗಬಾರದು.

ಉದಾ.—ಪಾರ್ವತಿ ತಂದೆ ಮಾಡಿದ ಯಜ್ಞೋತ್ಸವಕ್ಕೆ ಕರೆಯಿಸಿ ಕೊಳ್ಳದೆ ಹೋಗಿ ಅಪಮಾನಪಟ್ಟು ದೇಹವನ್ನು ಬಿಟ್ಟಳು.

17. ದುರ್ಜನನಿಗೆ ದೂತನಾಗಬಾರದು.

ಉದಾ.—ರಾವಣನಿಂದ ಸುಗ್ರೀವನ ಸಮೀಪಕ್ಕೆ ದೂತನಾಗಿ ಕಳುಹಿಸಲ್ಪಟ್ಟ ಶುಕನು ಕಪಿಗಳ ಪ್ರಹಾರಗಳಿಗೆ ಗುರಿ ಯಾದನು.

18. ಕಷ್ಟವು ಪ್ರಾಪ್ತವಾದರೂ ಸತ್ಯವನ್ನು ಬಿಡಕೂಡದು.

ಉದಾ.—ಹರಿಶ್ಚಂದ್ರನು ಆಡಿದ ಭಾಷೆಗೆ ತಪ್ಪಬಾರದೆಂದು ರಾಜ್ಯ ವನ್ನು ಬಿಟ್ಟು ಹೆಂಡತಿ ಮಕ್ಕಳಿಂದ ಅಗಲಿ ಅನೇಕ ಸಂಕಟ ಗಳನ್ನು ಅನುಭವಿಸಿದನು.

19. ತನ್ನನ್ನು ತಾನೇ ಹೊಗಳಿಕೊಳ್ಳಬಾರದು.

ಉದಾ.—ಆತ್ಮಸ್ತುತಿಯಿಂದಲೇ ಯಯಾತಿ ಸ್ವರ್ಗದಿಂದ ಕೆಳಕ್ಕೆ ಬಿದ್ದನು.

20. ತಾಯಿತಂದೆಗಳನ್ನು ಭಕ್ತಿಯಿಂದ ಸಂತೋಷಪಡಿಸಬೇಕು.

ಉದಾ.—ತಾಯ ಶಾಪದಿಂದಲೇ ಹಾವುಗಳಿಗೆ ಸರ್ಪಯಾಗದಲ್ಲಿ ನಾಶವುಂಟಾಯಿತು. ತಂದೆಯನ್ನು ಸಂತೋಷಪಡಿಸಿದುದರಿಂದ ಯಯಾತಿಯ ಕಿರಿಯ ಮಗನು ಚಕ್ರವರ್ತಿಯಾದನು.

21. ಮೋಸದ ಕೆಲಸವನ್ನು ಮಾಡಬಾರದು.

ಉದಾ.—ಸೀತೆಯನ್ನು ಮೋಸಗೊಳಿಸುವುದಕ್ಕೆ ಬಂದ ಮಾರೀಚನು ಹತನಾದನು. ಕರ್ಣನು ಬ್ರಾಹ್ಮಣ ವೇಷವನ್ನು ಹಾಕಿಕೊಂಡು ಮೋಸದಿಂದ ಕಲಿತುಕೊಂಡ ಅಸ್ತ್ರವಿದ್ಯೆ ಯುದ್ಧಕಾಲದಲ್ಲಿ ಅವನಿಗೆ ನಿಷ್ಫಲವಾಯಿತು.

22. ಸಜ್ಜನರು ತಮ್ಮ ಕಷ್ಟವನ್ನು ನೋಡದೆ ಪರರಿಗೆ ಉಪಕಾರವನ್ನು ಮಾಡುತ್ತಾರೆ.

ಉದಾ.—ಶಿಬಿಚಕ್ರವರ್ತಿ ತನ್ನ ಮೈಯ ಮಾಂಸವನ್ನು ಕೊಟ್ಟು ಕಪೋತಪಕ್ಷಿಯನ್ನು ಕಾಪಾಡಿದನು.

23. ಸತ್ಯಕ್ಕೆ ಸ್ವಲ್ಪವೂ ಕುಂದಕಬಾರದಂತೆ ನಡೆದುಕೊಳ್ಳಬೇಕು.

ಉದಾ.—ಸತ್ಯವನ್ನು ಸ್ವಲ್ಪ ಬಿಟ್ಟುದರಿಂದ ಧರ್ಮರಾಯನು ನರಕಯಾತನೆಗಳನ್ನು ನೋಡಬೇಕಾಯಿತು.

24. ದೊಡ್ಡವರಿಗೆ ಅವಮರ್ಯಾದೆ ಮಾಡಿದರೆ ಕೇಡುಂಟಾಗುವುದು.

ಉದಾ.—ಚಾಣಕ್ಯನಿಗೆ ಅಪಮಾನಮಾಡಿದುದರಿಂದ ನಂದರು ನಾಶವನ್ನೈದಿದರು. ದುರ್ವಾಸ ಋಷಿಗೆ ಅವಮರ್ಯಾದೆ ಮಾಡಿ ಇಂದ್ರನು ಸ್ವರ್ಗಾಧಿಪತ್ಯವನ್ನು ಕಳೆದುಕೊಂಡನು.

25. ಕಳ್ಳನು ಶಿಕ್ಷೆಯನ್ನು ಹೊಂದದೆ ಇರುವುದಿಲ್ಲ.

ಉದಾ.—ವೇದಗಳನ್ನು ಕದ್ದುಕೊಂಡು ಹೋದ ಸೋಮಕನು ಮತ್ಸ್ಯರೂಪಿಯಾದ ವಿಷ್ಣುವಿನಿಂದ ಕೊಲ್ಲಲ್ಪಟ್ಟನು. ಸೀತೆಯನ್ನು ಕದ್ದುಕೊಂಡುಹೋದ ರಾವಣನು ನಾಶವಾದನು.

26. ಉನ್ನತ ಪದವಿಯಲ್ಲಿ ಇರುವವರು ತಮ್ಮ ಪೂರ್ವ ಸ್ನೇಹಿತರನ್ನು ಮರೆತುಬಿಡುತ್ತಾರೆ.

ಉದಾ.—ದ್ರುಪದರಾಜನು ತನ್ನ ಸಹಾಧ್ಯಾಯಿಯಾಗಿದ್ದ ಬಡವನಾದ ದ್ರೋಣನನ್ನು ಸ್ನೇಹದಿಂದ ಕಂಡನೇ ?

27. ಪರರ ಸೇವೆಯನ್ನು ಮಾಡುವುದು ಬಹಳ ಕಷ್ಟ.

ಉದಾ.—ಧರ್ಮರಾಯನು ತನ್ನ ತಲೆಯಮೇಲೆ ವಿರಾಟನು ಹೊಡೆದರೂ ಸೈರಿಸಿಕೊಳ್ಳಬೇಕಾಯಿತು.

28. ಒಳ್ಳೆಯ ಪ್ರಭುವನ್ನು ಆಶ್ರಯಿಸುವುದರಿಂದ ಸೌಖ್ಯವುಂಟಾಗುತ್ತದೆ.

ಉದಾ.—ಶ್ರೀರಾಮನಲ್ಲಿ ಶರಣಾಗತನಾದ ವಿಭೀಷಣನಿಗೆ ರಾಜ್ಯಾಭಿಷೇಕವಾಯಿತು.

29. ಜನರು ಧೀರರಾದರೂ ಸಮಯವನ್ನು ನಿರೀಕ್ಷಿಸಬೇಕು.

ಉದಾ.—ಪಾಂಡವರು ಕೌರವರನ್ನು ಅಡಗಿಸುವುದಕ್ಕೆ ಶಕ್ತಿಯುಳ್ಳವರಾದರೂ ಬಹಳ ದಿವಸ ವನದಲ್ಲಿ ವಾಸಮಾಡಿದರು.

30. ಆಪತ್ಕಾಲದಲ್ಲಿ ಶೂರತನವನ್ನು ಬಿಡಕೂಡದು.

ಉದಾ.—ಆಂಜನೇಯನು ರಾಕ್ಷಸರು ತನ್ನನ್ನು ಕಟ್ಟಿಹಾಕಿ ಬಾಲವನ್ನು ಉರಿಸಿ ಪೀಡಿಸಿದರೂ ಲಂಕೆಯನ್ನು ಸುಡದೆ ಬಿಡಲಿಲ್ಲ.

31. ಆರಂಭಿಸಿದ ಕೆಲಸವನ್ನು ಪೂರೈಸದೆ ಬಿಡಬಾರದು.

ಉದಾ.—ಪರಶುರಾಮನು ಕ್ಷತ್ರಿಯರೆಲ್ಲರೂ ನಾಶವಾಗುವವರೆಗೂ ಯುದ್ಧವನ್ನು ಬಿಡಲಿಲ್ಲ.

32. ಶತ್ರುಗಳ ಗುಂಪನ್ನು ಒಬ್ಬನೇ ಪ್ರವೇಶಿಸಬಾರದು.

ಉದಾ.—ಕೌರವರ ಸೈನ್ಯಕ್ಕೆ ಏಕಾಕಿಯಾಗಿ ನುಗ್ಗಿದ ಅಭಿಮನ್ಯು ಪ್ರಾಣವನ್ನು ಬಿಟ್ಟನು.

33. ದೊಡ್ಡವರು ಮಾಡುವ ಹಿತೋಪದೇಶವನ್ನು ಕೇಳುವುದರಿಂದ ಲಾಭವುಂಟು.

ಉದಾ.—ಗರ್ಭದಲ್ಲಿದ್ದ ಪ್ರಹ್ಲಾದನು ನಾರದರ ಉಪದೇಶದಿಂದ ಒಳ್ಳೆಯ ಜ್ಞಾನಿಯಾದನು. ಭೀಷ್ಮರಲ್ಲಿ ಧರ್ಮಗಳನ್ನು ಕೇಳಿ ಧರ್ಮರಾಯನು ಅಪಾರವಾದ ತನ್ನ ದುಃಖವನ್ನು ಬಿಟ್ಟನು.

34. ಕಷ್ಟವು ಬಂದಾಗ ದೇವರಲ್ಲಿ ಶರಣಾಗತರಾಗಬೇಕು.

ಉದಾ.—ದ್ರೌಪದಿಯೂ ಗಜೇಂದ್ರನೂ ಕಷ್ಟಕಾಲದಲ್ಲಿ ದೇವರನ್ನು ಭಜಿಸಿ ಸೌಖ್ಯವನ್ನು ಹೊಂದಿದರು.

35. ವಿನಯದಿಂದ ಕಷ್ಟವಾದ ಕೆಲಸವನ್ನೂ ಕೂಡ ಸುಲಭವಾಗಿ ಸಾಧಿಸಬಹುದು.

ಉದಾ.—ಕಚನು ವಿನೀತನಾಗಿದ್ದು ದೈತ್ಯ ಗುರುವಾದ ಶುಕ್ರಾಚಾರ್ಯನಿಂದ ದೇವತೆಗಳಿಗೆ ಮರಣವಿಲ್ಲದೆ ಇರುವಂತೆ ಮೃತ ಸಂಜೀವಿನಿಯನ್ನು ಕಲಿತುಕೊಂಡನು.

36. ಕಾಡಿನಲ್ಲಿ ಒಬ್ಬನೇ ಸಂಚಾರಮಾಡಬಾರದು.

ಉದಾ.—ಸೈನ್ಯವನ್ನು ಬಿಟ್ಟು ಕಾಡಿನಲ್ಲಿ ಏಕಾಕಿಯಾಗಿ ಸುತ್ತುತ್ತಿದ್ದ ಪ್ರಸೇನನು ಸಿಂಹದಿಂದ ಕೊಲ್ಲಲ್ಪಟ್ಟನು.

37. ತಾನೇ ಒಬ್ಬರಲ್ಲಿ ವೈರವನ್ನು ಹುಟ್ಟಿಸಬಾರದು.

ಉದಾ.—ಸಭೆಯಲ್ಲಿ ಜಾರಿಬಿದ್ದ ದುರ್ಯೋಧನನನ್ನು ನೋಡಿ ಭೀಮನು ನಕ್ಕುದು ಯುದ್ಧಕ್ಕೆ ಮೂಲವಾಯಿತು.

38. ಇತರರು ಮಾಡಿದ ಅಪರಾಧಗಳನ್ನು ಕ್ಷಮಿಸಬೇಕು.

ಉದಾ.—ದ್ರೋಣಾಚಾರ್ಯನು ಕೈಕಾಲುಗಳನ್ನು ಬಿಗಿದು ಕಟ್ಟಿ ಅರ್ಜುನನು ಎಳೆದುಕೊಂಡು ಬಂದ ಅಪರಾಧಿಯಾದ ದ್ರುಪದನನ್ನು ಕ್ಷಮಿಸಿ ಬಿಡಿಸಿದನು.

39. ಜೂಜಾಟದಲ್ಲಿ ಸೋತವನನ್ನು ನೋಡಿ ಹಾಸ್ಯಮಾಡಬಾರದು.

ಉದಾ.—ರುಕ್ಮಿ ಜೂಜಾಟದಲ್ಲಿ ಬಲದೇವನನ್ನು ಜಯಿಸಿ ಫಕ್ಕನೆ ನಕ್ಕುದರಿಂದ ಆ ಕ್ಷಣವೇ ಕೊಲ್ಲಲ್ಪಟ್ಟನು.

40. ಉನ್ನತ ಸ್ಥಿತಿಯಿಂದ ಹೀನಸ್ಥಿತಿಗೆ ಬಂದವನು ಮರೆಯಾಗಿದ್ದು ಕಾಲವನ್ನು ಕಳೆಯಬೇಕು.

ಉದಾ.—ಪುಷ್ಕರನೊಡನೆ ಜೂಜಾಡಿ ರಾಜ್ಯವನ್ನು ಕಳೆದುಕೊಂಡ ನಳಮಹಾರಾಜನು ಋತುಪರ್ಣರಾಜನಲ್ಲಿ ಯಾರಿಗೂ ತಿಳಿಯದಂತೆ ಸಾರಥಿಯಾಗಿದ್ದನು.

41. ಶಾಂತರಾದ ಸತ್ಪುರುಷರನ್ನು ರೇಗಿಸಬಾರದು.

ಉದಾ.—ಸಗರನ ಮಕ್ಕಳು ಯಜ್ಞದ ಕುದುರೆಯನ್ನು ಹುಡುಕುವುದಕ್ಕೆ ಹೋಗಿ ಕಪಿಲ ಋಷಿಯನ್ನು ರೇಗಿಸಿ ಎಲ್ಲರೂ ಭಸ್ಮವಾದರು. ಪರೀಕ್ಷಿದ್ರಾಜನು ಋಷಿಯನ್ನು ರೇಗಿಸಿ ಶಾಪವನ್ನು ಹೊಂದಿ ಹಾವಿನಿಂದ ಕಚ್ಚಲ್ಪಟ್ಟು ಸತ್ತನು.

42. ಕಷ್ಟವಾಗಿದ್ದರೂ ತಾನು ಮಾಡತಕ್ಕ ಕೆಲಸವನ್ನು ಮಾಡಲೇ ಬೇಕು.

ಉದಾ.—ಅರ್ಜುನನು ಕ್ಷತ್ರಿಯ ಧರ್ಮವೆಂದು ತಿಳಿದು ಗುರುಗಳೊಡನೆ ಯುದ್ಧ ಮಾಡುವುದಕ್ಕೆ ಹಿಂದೆಗೆಯಲಿಲ್ಲ.

43. ಹೆಂಡವನ್ನು ಕುಡಿಯುವುದು ಬಹಳ ಕೆಟ್ಟುದು.

ಉದಾ.—ಯಾದವರು ಮದ್ಯಪಾನಮಾಡಿ ಮೈಮರೆತು ಪರಸ್ಪರ ಹೊಡೆದಾಡಿ ಎಲ್ಲರೂ ನಾಶವಾದರು.

44. ಶತ್ರುಗಳನ್ನು ಅಡಗಿಸಬೇಕಾದರೆ ಅವರಿಗೆ ವಿರೋಧಿಯಾಗಿರುವವನ ಸ್ನೇಹವನ್ನು ಮಾಡಬೇಕು.

ಉದಾ.—ಕೌರವರು ಪಾಂಡವರಿಗೆ ವಿರೋಧಿಯಾದ ಕರ್ಣನನ್ನು ತಮಗೆ ಆಪ್ತ ಸ್ನೇಹಿತನನ್ನಾಗಿ ಮಾಡಿಕೊಂಡರು.

45. ತನ್ನ ಕುಲಕ್ಕೆ ತಕ್ಕ ಕೆಲಸವನ್ನು ಮಾಡಬೇಕು.

ಉದಾ.—ವಿಶ್ವಾಮಿತ್ರನು ವಸಿಷ್ಠನ ಮಕ್ಕಳನ್ನೆಲ್ಲಾ ಕೊಲ್ಲಲು ಬ್ರಹ್ಮಪುತ್ರನಾದ ವಸಿಷ್ಠನು ಶಕ್ತನಾಗಿದ್ದರೂ ಪ್ರತಿಯನ್ನು ಮಾಡುವುದಕ್ಕೆ ಹಿಂದೆಗೆದನು.

46. ಮಾಡಿದ ಉಪಕಾರವನ್ನು ಮರೆತು ಕೃತಘ್ನನಾಗಬಾರದು.

ಉದಾ.—ಉಪಕಾರಿಯಾದ ನಾಡೀಜಂಘವೆಂಬ ಬಕವನ್ನು ಕೊಂದ ಗೌತಮನು ಕಷ್ಟಕ್ಕೆ ಗುರಿಯಾದನು.

47. ನಿಷ್ಠುರವಾದ ಮಾತುಗಳನ್ನು ಆಡಬಾರದು.

ಉದಾ.—ಕೌರವರು ಆಡಿದ ನಿಷ್ಠುರವಾದ ಮಾತುಗಳನ್ನೇ ಸ್ಮರಿಸಿಕೊಂಡು ಭೀಮನು ಅವರ ಕುಲಕ್ಷಯವನ್ನು ಮಾಡಿದನು. ಶಿಶುಪಾಲನು ನಿಷ್ಠುರವಾದ ಮಾತುಗಳಿಂದಲೇ ಮರಣವನ್ನು ಹೊಂದಿದನು.

48. ಉತ್ಸವ ಕಾಲಗಳಲ್ಲಿ ಬಂಧುಗಳನ್ನು ಕರೆಯದೆ ಇರಬಾರದು.

ಉದಾ.—ಅಳಿಯನಾದ ಈಶ್ವರನನ್ನು ಕರೆಯದೆ ಇದ್ದ ದಕ್ಷನ ಯಜ್ಞವು ಹಾಳಾಗಿಹೋಯಿತು.

49. ರಾತ್ರಿಯ ವೇಳೆಯಲ್ಲಿ ವಿಶೇಷವಾಗಿ ಸಂಚರಿಸಬಾರದು.
ಉದಾ.—ರಾತ್ರಿಯಲ್ಲಿ ಸಂಚರಿಸುತ್ತಿದ್ದ ಮಾಂಡವ್ಯನನ್ನು ಕಳ್ಳನೆಂದು ಭಾವಿಸಿ ಶೂಲಕ್ಕೆ ಹಾಕಿದರು

50. ಭಿಕ್ಷವನ್ನು ನೀಡಿ ಭೋಜನಮಾಡಬೇಕು.
ಉದಾ.—ಶ್ವೇತನೆಂಬ ದೊರೆ ಯಾರಿಗೂ ಏನೂ ಕೊಡದೆ ತಿಂದುದರಿಂದ ತನ್ನ ಮಾಂಸವನ್ನೇ ತಾನು ತಿನ್ನುವಂತಾಯಿತು.

51. ಪರರನ್ನು ಪರಿಹಾಸಮಾಡಬಾರದು.
ಉದಾ.—ಅಷ್ಟಾವಕ್ರನನ್ನು ನೋಡಿ ನಕ್ಕ ಗೋಪಸ್ತ್ರೀಯರು ಕಷ್ಟಕ್ಕೆ ಗುರಿಯಾದರು. ಸುದರ್ಶನನೆಂಬ ಗಂಧರ್ವನು ಕುರೂಪಿಯಾದ ಅಂಗಿರಸ ಋಷಿಯನ್ನು ನೋಡಿ ನಕ್ಕು ಶಾಪದಿಂದ ಸರ್ಪವಾದನು. ನಂದಿಯನ್ನು ನೋಡಿ ನಕ್ಕ ರಾವಣನು ಶಾಪವನ್ನು ಹೊಂದಿದನು.

52. ಮನುಷ್ಯರಿಗೆ ಕಷ್ಟಕಾಲದಲ್ಲಿ ಉಪಯೋಗವಾಗುವಂಥ ವಿದ್ಯೆಗಳಲ್ಲಿಯೂ ಪರಿಶ್ರಮವಿರಬೇಕು.
ಉದಾ.—ವಿರಾಟರಾಯನ ಮನೆಯಲ್ಲಿ ಭೀಮನು ಅಡಿಗೆಯವನಾಗಿದ್ದನು.

53. ಜನರು ಲೋಕಾಪವಾದಕ್ಕೆ ಹೆದರಬೇಕು.
ಉದಾ.—ಶ್ರೀಕೃಷ್ಣನು ಸ್ಯಮಂತಕ ಮಣಿಯನ್ನು ತಾನು ತೆಗೆದುಕೊಳ್ಳದೆ ಇದ್ದರೂ ಲೋಕಾಪವಾದಕ್ಕೆ ಅಂಜಿ ಆ ಮಣಿಯನ್ನು ಹುಡುಕಿ ತೆಗೆದುಕೊಂಡುಬಂದು ಸತ್ರಾಜಿತ್ತಿಗೆ ಕೊಟ್ಟನು. ಶ್ರೀರಾಮನು ಈ ಕಾರಣದಿಂದಲೇ ಸೀತಾದೇವಿಯನ್ನು ಕಾಡಿಗೆ ಕಳುಹಿಸಿದನು.

54. ಒಬ್ಬನು ಪರಾಕ್ರಮಶಾಲಿಯಾದರೂ ಅವನನ್ನು ಪ್ರೋತ್ಸಾಹಪಡಿಸದೆ ಹೀಯಾಳಿಸುತ್ತಲೇ ಇದ್ದರೆ ಅವನ ಶಕ್ತಿ ಕಡಮೆಯಾಗುತ್ತದೆ.
ಉದಾ.—ಕರ್ಣನು ಧೀರನಾದರೂ ಶಲ್ಯನು ಜರೆಯುತ್ತಲೇ ಇದ್ದುದರಿಂದ ಸೋತುಹೋದನು.

5. ಕೆಟ್ಟ ದೊರೆ ಆಳುವ ರಾಜ್ಯದಲ್ಲಿ ವಾಸಮಾಡಬಾರದು.

ಉದಾ.—ರಾವಣನ ರಾಜ್ಯವಾದ ಲಂಕೆಯಲ್ಲಿದ್ದವರೆಲ್ಲರೂ ನಾಶವಾದರು.

6. ತಂದೆ ಪುತ್ರನಿಂದ ಅಪಜಯವನ್ನು ಇಚ್ಛಿಸಬೇಕು.

ಉದಾ.—ಅರ್ಜುನನು ತನ್ನ ಮಗನಾದ ಬಭ್ರುವಾಹನನ ದೆಸೆಯಿಂದ ಅಪಜಯವನ್ನು ಹೊಂದಿ ಸಂತೋಷಿಸಿದನು. ಶ್ರೀರಾಮನು ಕುಶಲವರ ಪರಾಕ್ರಮಕ್ಕೆ ಮೆಚ್ಚಿ ಬಹಳವಾಗಿ ಶ್ಲಾಘಿಸಿದನು.

7. ಮನುಷ್ಯನು ಮೇಲಾದ ಸ್ಥಿತಿಯನ್ನು ಹೊಂದುವುದಕ್ಕೆ ಪ್ರಯತ್ನ ಮಾಡಬೇಕು.

ಉದಾ.—ಧ್ರುವನು ಐದು ವರುಷದ ಹುಡುಗನಾಗಿದ್ದಾಗಲೇ ಘೋರವಾದ ತಪಸ್ಸನ್ನು ಮಾಡಿ ಉನ್ನತ ಸ್ಥಾನವನ್ನು ಹೊಂದಿದನು.

8. ಸತ್ತವರಿಗೋಸ್ಕರ ದುಃಖಪಡಬಾರದು.

ಉದಾ.—ಅರ್ಜುನನು ಶೂರನಾದ ತನ್ನ ಮಗ ಅಭಿಮನ್ಯು ಕೌರವರಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟರೂ ದುಃಖವನ್ನು ಬಿಟ್ಟು ಯುದ್ಧಮಾಡಿದನು.

9. ನೀಚರ ಸೇವಕರಾದರೆ ಒಳ್ಳೆಯವರಿಗೂ ಕೇಡುಂಟಾಗುವುದು.

ಉದಾ.—ಭೀಷ್ಮದ್ರೋಣರು ಮಹಾತ್ಮರಾದರೂ ದುರ್ಯೋಧನನಿಗೆ ಸೇವಕರಾದುದರಿಂದ ನಾಶವನ್ನು ಹೊಂದಿದರು.

0. ನಾಸ್ತಿಕ ವಾದವು ಕೆಟ್ಟುದು.

ಉದಾ.—ನಾಸ್ತಿಕ ವಾದವೇ ಹಿರಣ್ಯಕಶಿಪುವಿನ ಮರಣಕ್ಕೆ ಕಾರಣವಾಯಿತು.

1. ಬಂಧುಗಳಲ್ಲಿರುವ ಪರಸ್ಪರ ವೈರವನ್ನು ತಪ್ಪಿಸಬೇಕು. ಹಾಗೆ ಸಾಗದೆ ಇದ್ದರೆ ತಾನು ಒಂದು ಕಡೆಗೂ ಸೇರದೆ ತಟಸ್ಥನಾಗಿರಬೇಕು.

ಉದಾ.—ಬಲರಾಮನು ಪಾಂಡವರಿಗೂ ಕೌರವರಿಗೂ ಇದ್ದ ವೈರವನ್ನು ಬಿಡಿಸುವುದಕ್ಕೆ ಆಗದೆ ಯುದ್ಧದಲ್ಲಿ ಯಾರ ಕಡೆಗೂ ಸೇರದಂತೆ ತೀರ್ಥಯಾತ್ರೆಗೆ ಹೊರಟುಹೋದನು.

62. ಹೆಂಗಸು ಕಷ್ಟದಲ್ಲಿಯೂ ಸುಖದಲ್ಲಿಯೂ ಗಂಡನಲ್ಲಿ ಒಂದೇ ರೀತಿಯಾದ ವಿಶ್ವಾಸವನ್ನೂ ಪ್ರೀತಿಯನ್ನೂ ಇಡಬೇಕು.

ಉದಾ.—ದಮಯಂತಿ, ಸೀತಾದೇವಿ, ದ್ರೌಪದಿ, ಚಂದ್ರಮತಿ ಇವರುಗಳು ಗಂಡಂದಿರೊಂದಿಗೆ ಕಾಡಿನಲ್ಲಿ ವಾಸಮಾಡಿ ಅವರ ಕಷ್ಟಗಳಿಗೆ ಭಾಗಿನಿಗಳಾಗಿದ್ದು ಲೋಕದಲ್ಲಿ ಪ್ರಖ್ಯಾತಿಯನ್ನು ಪಡೆದರು.

63. ದೊಡ್ಡವರು ಆತುರಪಟ್ಟು ಕೆಲಸವನ್ನು ಮಾಡುವುದಿಲ್ಲ.

ಉದಾ.—ದುಷ್ಯಂತರಾಜನು ಕಣ್ವಋಷಿ ಕಳುಹಿಸಿದ ತನ್ನ ಹೆಂಡತಿಯಾದ ಶಕುಂತಳೆಯನ್ನು ಬಹಳವಾಗಿ ವಿಮರ್ಶೆ ಮಾಡಿ ಸ್ವೀಕರಿಸಿದನು.

64. ಮಾನಿಗಳು ಚಿಕ್ಕವರಾದರೂ ಸ್ವಲ್ಪ ಅಪಮಾನವನ್ನೂ ಕೂಡ ಸಹಿಸಲಾರರು.

ಉದಾ.—ಧ್ರುವನು ಐದು ವರುಷದವನಾದರೂ ಮಲತಾಯಿ ಹೇಳಿದ ಮಾತಿಗೆ ಅರಮನೆಯನ್ನು ಬಿಟ್ಟು ಅರಣ್ಯಕ್ಕೆ ಹೊರಟು ಹೋದನು.

65. ದೊಡ್ಡವರು ತಮ್ಮ ಕೆಲಸವು ಕೈಗೂಡುವವರೆಗೂ ಪ್ರಯತ್ನ ವನ್ನು ಬಿಡುವುದಿಲ್ಲ.

ಉದಾ.—ದೇವತೆಗಳು ರತ್ನಗಳಿಂದ ತೃಪ್ತಿಯನ್ನು ಹೊಂದದೆ, ಹುಟ್ಟಿದ ವಿಷಕ್ಕೆ ಹೆದರದೆ, ಅಮೃತವು ಸಿಕ್ಕುವವರೆಗೂ ಸಮುದ್ರವನ್ನು ಕಡೆದರು.

66. ಒಬ್ಬರು ಮಾಡುವ ದಾನವನ್ನು ತಪ್ಪಿಸಬಾರದು.

ಉದಾ.—ಶುಕ್ರಾಚಾರ್ಯನು ಬಲಿ ಮಾಡುತ್ತಿದ್ದ ದಾನವನ್ನು ತಪ್ಪಿಸುವುದಕ್ಕೆ ಪ್ರಯತ್ನಮಾಡಿ ಕುರುಡನಾದನು.

788—29. ಬೆಂಗಳೂರು ಪ್ರೆಸ್